# ದೇವರ ಮುದ್ರೆ

ಮಾಯೆ ಪ್ರಕೃತಿ

ಸಾಕ್ಷಿ ಪರಮಾತ್ಮ

ನಡೆಸುವವನು ಆತ್ಮ

ನಡೆಸಲ್ಪಡುವವನು ಜೀವಾತ್ಮ

ಶರೀರ




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (87) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ದೇವರ ಮುದ್ರೆ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (87) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಫೆಬ್ರವರಿ–2017

ಪ್ರತಿಗಳು : 1000 **ಬೆಲೆ. 120/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋಣಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದೇವರ ಮುದ್ರೆ



ದೇವರು' ಎಂದರೇ ತಿಳಿಯಲ್ಪಡದವನು ಎಂದು ಅರ್ಥ. ದೇವರಿಗೆ ನಿರ್ವಚನೆ ಹೇಳಿದರೆ 'ಹುಡುಕಲ್ಪಡುವವನು ದೇವರು' ಎಂದು ಹೇಳಬಹುದು. ಇನ್ನೂ ವಿವರವಾಗಿ ಹೇಳಿಕೊಂಡರೆ ಹುಡುಕಲ್ಪಡುವವನು ಯಾರೋ ಎನ್ನುವಂತಿರುತ್ತದೆ. ದೇವರಿಗೆ ಹೆಸರಿಲ್ಲ, ಇಂತಹವನೆಂದು ಹೇಳುವುದಕ್ಕೆ ಆಕಾರವಿಲ್ಲ. ಆದ್ದರಿಂದ  ಆತನನ್ನು 'ದೇವರು' ಎಂದು ಕರೆಯುತ್ತಿದ್ದೇವೆ. ಅಂತಹ ದೇವರ ಪಕ್ಷದಲ್ಲಿ ನಾನು ಇದ್ದೇನೆ ಎಂದು ಇತರರಿಗೆ ಹೇಳಬೇಕೆಂದರೆ ಆತನಿಗೆ ವ್ಯಕ್ತಿತ್ವ ಇಲ್ಲ, ಹೆಸರು ಇಲ್ಲ, ಆಕಾರವಿಲ್ಲ. ಹಾಗಿರುವಾಗ ಹೇಗೆ ಹೇಳಬೇಕು? ಎನ್ನುವುದು ಪ್ರಶ್ನೆಯಾಗಿ ಉಳಿದುಹೋಗುತ್ತಿದೆ. ಹೇಗೆ ಹೇಳಬೇಕೋ ದಾರಿ ತೋರಿಸಬೇಕಾದವನು ದೇವರೇ. ನಾನು ದೇವರ ಪಕ್ಷದಲ್ಲಿ ಇದ್ದೇನೆಂದು ಹೇಗೆ ಹೇಳಬೇಕೊ ತಿಳಿಯುವುದಕ್ಕೆ ಪ್ರಶ್ನೆಯಾಗಿ ಉಳಿದಿರುವುದಕ್ಕೆ ಉತ್ತರವನ್ನು ತಿಳಿಸೆಂದು ತಿಳಿಯದ ದೇವರನ್ನೇ ಕೋರಿಕೊಳ್ಳುವುದಕ್ಕೆ ಆತನು ಯೊರೊಂದಿಗೂ ಮಾತನಾಡುವುದಿಲ್ಲ. ಯಾವ ಕೆಲಸ ಮಾಡುವುದಿಲ್ಲ. ಯಾರೊಂದಿಗೂ ಮಾತನಾಡದವನು ನನಗಾಗಲಿ, ನಿನಗಾಗಲಿ ಸಮಾಧಾನ ಹೇಳುವುದಿಲ್ಲ ಎಂದಲ್ಲವೇ ಅರ್ಥ.

ದೇವರು ಮಾತನಾಡುವುದಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿ ದೇವರಿಗೆ ಸಂಬಂಧಿಸಿದ ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ಸೂರಾ 42, ಆಯತ್ 51ರಲ್ಲಿ ಹೀಗೆ ಇದೆ ನೋಡಿರಿ. **(42-51) "ದೇವರು ಯಾವ ಮಾನವನೊಂದಿಗೂ ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ"** ಎಂದು ಇದೆ. ಇದೇ ವಾಕ್ಯದಲ್ಲಿಯೇ "ದೇವರು ಮೂರು ವಿಧಗಳ ತನ್ನ ಜ್ಞಾನವನ್ನು ತಿಳಿಸುತ್ತಾನೆ" ಎಂದು ಇದೆ. ದೇವರು ನೇರವಾಗಿ ಯಾರೊಂದಿಗೂ ಮಾತನಾಡದಿದ್ದರೂ ಬೇರೆ ವಿಧಾನದ ಮುಖಾಂತರ ತನ್ನ ಜ್ಞಾನವನ್ನು ತಿಳಿಸುತ್ತಾನೆಂದು ಇದೆ ಅಲ್ಲವೆ! ಈಗ ಜ್ಞಾನ ಎಂದರೇ ಏನೋ ತಿಳಿದುಕೊಳ್ಳೋಣ. ಸರಾಸರಿ ಸಮಾಧಾನವಾಗಿ ಹೇಳಿದರೆ **"ಪ್ರತಿ ಪ್ರಶ್ನೆಗು ಉತ್ತರವಾಗಿ ಇರುವುದೇ ಜ್ಞಾನ"**. ನಿರ್ವಚನೆಯಾಗಿ ಹೇಳಿದರೆ **'ಜ್ಞಪ್ತಿ'** ಎನ್ನುವ ಶಬ್ದದಿಂದ **'ಜ್ಞಾನ'** ಎನ್ನುವ ಶಬ್ದ ಉತ್ಪತ್ತಿ ಆಗಿದೆ. ಜ್ಞಪ್ತಿ ಎಂದರೇ

**'ಎಚ್ಚರ'** ಎಂದು ಅರ್ಥ. ಎಚ್ಚರ ಎಂದರೆ ತಿಳಿಯಲ್ಪಡುವ ಸತ್ಯ ಎಂದು ಅರ್ಥ. ಕೊನೆಗೆ ಸತ್ಯ ಏನಾದರೆ ಇದೆಯೋ ಅದೇ ಜ್ಞಾನ ಎಂದು ಹೇಳಬಹುದು. ಈಗ ಅಸಲು ವಿಷಯಕ್ಕೆ ಬಂದು ನೋಡಿದರೆ ದೇವರು ತಿಳಿಯಲ್ಪಡುವುದಿಲ್ಲ. ಆತನಿಗೆ ರೂಪ, ಹೆಸರು, ಕೆಲಸ ಇಲ್ಲವೆಂದು ಹೇಳಿಕೊಂಡಿದ್ದೇವೆ. ತಿಳಿಯಲ್ಪಡದ ದೇವರನ್ನು ಕುರಿತಾದ ಸತ್ಯ ಏನಾದರೆ ಇದೆಯೋ ಅದನ್ನು ತಿಳಿಯುವುದನ್ನು ದೇವರ ಜ್ಞಾನವನ್ನು ತಿಳಿದಂತಾಗುತ್ತದೆ.

ದೇವರು ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ, ಜ್ಞಾನವನ್ನು ಹೇಳುವುದಿಲ್ಲ ಆದರೆ, ಪರೋಕ್ಷವಾಗಿ ತನನ್ನು ಕುರಿತಾದ ಸತ್ಯವನ್ನು ತಿಳಿಸುತ್ತಾನೆ. ಆದರೆ ಮನುಷ್ಯನಿಗೆ ದೇವರನ್ನು ಕುರಿತು ತಿಳಿಯಬೇಕೆನ್ನುವ ಶ್ರದ್ಧೆ ಇರುವಾಗ, ದೇವರು ಪರೋಕ್ಷವಾಗಿ ತಿಳಿಸಿರುವುದು ಏನೊ ಅದು ಸತ್ಯವಾಗಿ ತಿಳಿಯಲ್ಪಡುತ್ತದೆ. ಶ್ರದ್ಧೆ ಇಲ್ಲದಿದ್ದರೆ ದೇವರು ತಿಳಿಸಿದ ಸತ್ಯ ಅಸತ್ಯವಾಗಿ ಅರ್ಥವಾಗುತ್ತದೆ. ದೇವರ ಪರೋಕ್ಷವಾಗಿ ತಿಳಿಸಿರುವುದು ಮೂರು ಗ್ರಂಥಗಳ ರೂಪದಲ್ಲಿ ಎಲ್ಲರಿಗೂ ತಿಳಿಯುವಹಾಗೆ ಇದೆ. ಮೂರು ದೈವಗ್ರಂಥಗಳೆಂದು ಹೆಸರುವಾಸಿಯಾದ **ತೌರಾತ್, ಇಂಜೀಲ್, ಖುರ್‌ಆನ್** ಎನ್ನುವ ಮೂರು ದೈವ ಗ್ರಂಥಗಳಲ್ಲಿ ದೇವರು ಇತರರ ಮುಖಾಂತರ ಪರೋಕ್ಷವಾಗಿ ತಿಳಿಸಿದ ಸತ್ಯವು (ಜ್ಞಾನ) ಇದೆ. ವಾಕ್ಯದ ರೂಪದಲ್ಲಿ ಬರೆಯಲ್ಪಟ್ಟ ಜ್ಞಾನ ಶ್ರದ್ಧೆಯಿಲ್ಲದ ಮನುಷ್ಯನಿಗೆ ಅರ್ಥವಾದಂತೆ ಇರುತ್ತದೆ ಆದರೆ, ಅದು ಅಸತ್ಯವಾಗಿ ಅರ್ಥವಾಗಿರುತ್ತದೆ. ವಾಕ್ಯ ಶ್ರದ್ಧೆ ಇದ್ದರೇನೆ ಸತ್ಯವಾಗಿ ಅರ್ಥವಾಗುತ್ತದೆ. ಅಂದರೇ ಹೇಳಲಾದ ವಾಕ್ಯದಲ್ಲಿನ ಜ್ಞಾನ ಅರ್ಥವಾಗುತ್ತದೆ. ಶ್ರದ್ಧೆ ಇಲ್ಲದಿದ್ದರೆ ಹೇಳಿರುವುದು ಜ್ಞಾನವೇ ಆದರೂ ಅದು ಅಜ್ಞಾನವಾಗಿ ಅರ್ಥವಾಗುತ್ತದೆ.

**ಪ್ರಶ್ನೆ :- ನೀವು ಹೇಳುವುದು ಕೇಳುವುದಕ್ಕೆ ಚೆನ್ನಾಗಿಯೇ ಇದೆ ಆದರೆ, ಆಚರಣೆಯಲ್ಲಿ ಅನುಭವಕ್ಕೆ ದೂರವಾಗಿರುವ ವಿಷಯವನ್ನು ನೀವು ಹೇಳುತ್ತಿರುವಂತೆ ಅರ್ಥವಾಗುತ್ತಿದೆ. ನನ್ನ ಪ್ರಶ್ನೆ ಏನು ಎಂದರೇ ಒಬ್ಬನು ಚೆನ್ನಾಗಿ ಓದುತ್ತಿರುವವನು ಇದ್ದಾನೆ. ಆತನು ಓದಿನಲ್ಲಿ ಮೇಧಾವಿ, ಜ್ಞಾಪಕಶಕ್ತಿ ಹೆಚ್ಚಾಗಿರುವವನು. ಆತನು**

ಈ ಮಧ್ಯದಲ್ಲಿಯೇ ಕಲೆಕ್ಟರ್ ಉದ್ಯೋಗದಲ್ಲಿ ಸೇರಿದ್ದಾನೆ. ಕಲೆಕ್ಟರ್ ಉದ್ಯೋಗ ಬರಬೇಕೆಂದರೆ ಆತನು ಓದಿದ ಓದಿನಲ್ಲಿ ಎಷ್ಟೋ ಅವಗಾಹನೆ ಇದ್ದಾಗಲೇ I.A.S ಪಾಸ್ ಆಗಲಾರನು. ಅಂತಹ ಮೇದಾಶಕ್ತಿ (ಮೈಂಡ್‌ಪವರ್) ಇರುವ ವ್ಯಕ್ತಿ ಭಗವದ್ಗೀತೆಯನ್ನು ಓದಿ ಅದರಲ್ಲಿ ಗುಣತ್ರಯ ವಿಭಾಗಯೋಗದಲ್ಲಿ ಓದಿದ ಶ್ಲೋಕಗಳಿಗೆ ವಿರುದ್ಧವಾಗಿ, ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ ಶ್ಲೋಕದಲ್ಲಿನ ಭಾವನೆಯನ್ನು ಅರ್ಥ ಮಾಡಿಕೊಳ್ಳುವುದು ನಡೆದಿದೆ. ಹಾಗೆಯೇ ಜ್ಞಾನ ಯೋಗದಲ್ಲಿ ಓದಿದ ಶ್ಲೋಕಗಳಿಗೆ ಭಾವನೆಯನ್ನು ಸತ್ಯಸಮೇತವಾಗಿ ತಿಳಿಯದೆಹೋಗಿದ್ದಾನೆ. ಪ್ರಪಂಚದಲ್ಲಿ ಎಷ್ಟೋ ತಿಳುವಳಿಕೆಯುಳ್ಳವನು ದೇವರ ವಿಷಯದಲ್ಲಿ ಅಸತ್ಯ ಭಾವನೆಯನ್ನು ಅರ್ಥ ಮಾಡಿಕೊಂಡಿದ್ದಾನೆ. ಆತನ ವಿಷಯ ಹಾಗಿರುವಾಗ, ಅದೇ ಊರಿನಲ್ಲಿ ಐದನೆ ತರಗತಿ ಓದಿದ ವ್ಯಕ್ತಿ ಕೂಡಾ ಭಗವದ್ಗೀತೆಯನ್ನು ನಿಧಾನವಾಗಿ ಓದಿದ್ದಾನೆ ಒಂದು ದಿನ ಇಬ್ಬರೂ ಒಂದುಕಡೆ ಬೇಟಿಯಾದಾಗ ಭಗವದ್ಗೀತೆ ವಿಷಯವನ್ನು ಮಾತನಾಡಿದರು. ಮೇದಾವಿಯಾದ ವ್ಯಕ್ತಿ "ದೇವರು ಭಗವಂತನಾಗಿ ಬಂದರೆ ದುರ್ಮಾರ್ಗರನ್ನು ಇಲ್ಲದಂತೆ ಸಂಹರಿಸುತ್ತಾನೆ" ಎಂದು ಹೇಳಿದಾಗ, ಐದನೆ ತರಗತಿಯನ್ನು ಓದಿಕೊಂಡ ವ್ಯಕ್ತಿ "ದೇವರು ಎಂದಿಗೂ ಯಾರನ್ನು ಸಂಹರಿಸುವುದಿಲ್ಲ. ಸಂಹರಿಸದೆ ಆತನ ಭಾವನೆಯನ್ನು ಬದಲಾಯಿಸಿ ಮೊದಲ ಭಾವನೆಯಿರುವ ವ್ಯಕ್ತಿಯಾಗಿ ಇಲ್ಲದಂತೆ ಮಾಡುತ್ತಾನೆ. ಆಗ ಅದೇ ಮನುಷ್ಯನೇ ಬದಲಾದ ಭಾವನೆಯಿರುವ ಮನುಷ್ಯನಾಗಿ ಹೊಸದಾಗಿ ತಯಾರಾಗುತ್ತಾನೆ. ಆಗ ಮೊದಲನೆಯವನು ಇಲ್ಲವೆಂದೇ ಹೇಳಬೇಕು. ಕೆಟ್ಟವನು ಹೋಗಿ ಒಳ್ಳೆಯವನು ಬಂದಿದ್ದಾನೆಂದು ಹೇಳಬೇಕು. ಅದೇ ವಿಷಯವನ್ನು ತಿಳಿಸುತ್ತಾ ಕೆಟ್ಟವರನ್ನು ಇಲ್ಲದಂತೆ ಮಾಡಿ, ಒಳ್ಳೆಯವರನ್ನು ತಯಾರು ಮಾಡುತ್ತೇನೆಂದು ಹೇಳಿದ್ದಾನೆ. ಅದನ್ನೇ "ವಿನಾಶಾಯಚ ದುಷ್ಕೃತಾಮ್" ಎಂದಿದ್ದಾನೆ. ಅದರ ಅರ್ಥ ಕೆಟ್ಟವರನ್ನು ಸಾಯಿಸುವೆನೆಂದಲ್ಲ. ಕೆಟ್ಟವರನ್ನು ಒಳ್ಳೆಯವರನ್ನಾಗಿ ಬದಲಾಯಿಸಿ ಕೆಟ್ಟವರನ್ನು ಇಲ್ಲದಂತೆ ಮಾಡುತ್ತೇನೆಂದಿದ್ದಾನೆ" ಎಂದು ಹೇಳಿದ್ದಾನೆ.

**ಎಷ್ಟೋ ದೊಡ್ಡ ಓದು ಓದಿಕೊಂಡವನು ತಿಳಿಯಬೇಕೆಂಬ ಶ್ರದ್ಧೆಯಿಂದ ಭಗವದ್ಗೀತೆಯನ್ನು ಓದಿದರೂ ಆತನಿಗೆ ಸರಿಯಾಗಿ ಶ್ಲೋಕದಲ್ಲಿನ ಭಾವನೆಯನ್ನು ತಿಳಿಯಲಿಲ್ಲ. ಓದನ್ನು ಸ್ವಲ್ಪ ಓದಿದವನು ಶ್ರದ್ಧೆಹಿಡದೆ ಯಾವಾಗಲೋ ಒಂದುಸಲ ಓದಿದರೂ ಆತನಿಗೇ ಚೆನ್ನಾಗಿ ಅರ್ಥವಾಗಿದೆ. ಇಲ್ಲಿ ಪ್ರತಿದಿನ ಓದುವವನಿಗೆ ಅರ್ಥವಾಗದೆ ಇರುವುದು, ಯಾವಾಗಲೋ ಒಂದುದಿನ ಓದುವವನಿಗೆ ಓದಿರುವುದು ಚೆನ್ನಾಗಿ ತಿಳಿಯುವುದು ನಡೆಯುವುದರಿಂದ, ಇಲ್ಲಿ ಶ್ರದ್ಧೆಯನ್ನನುಸರಿಸಿ ಜ್ಞಾನ ತಿಳಿಯುತ್ತದೆಂದು ತಿಳಿಯುವುದು ಇಲ್ಲ ಅಲ್ಲವೆ! ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :-** ಶ್ರದ್ಧೆ ಎನ್ನುವುದು ಸೂಕ್ಷ್ಮವಾದುದು. ಅದು ಮೇಲ್ನೋಟಕ್ಕೆ ಕಾಣಿಸುವುದು ಅಲ್ಲ. ಹೆಚ್ಚಾಗಿ ಓದಿರುವವನಲ್ಲಾಗಲಿ, ಪ್ರತಿ ದಿನ ಓದುವವನಲ್ಲಾಗಲಿ ಶ್ರದ್ಧೆ ಇದೆಯೆಂದು ಅಂದುಕೊಳ್ಳುವುದು ತಪ್ಪಾಗುತ್ತದೆ. ಹಾಗೆ ಕಡಿಮೆ ಓದಿರುವವನಲ್ಲಾಗಲಿ, ಯಾವಾಗಲೋ ಒಂದುಸಲ ಓದುವವನಲ್ಲಾಗಲಿ ಶ್ರದ್ಧೆಯಿಲ್ಲವೆಂದುಕೊಳ್ಳುವುದು ಕೂಡಾ ತಪ್ಪೇ ಆಗುತ್ತದೆ. ದೊಡ್ಡ ಓದು ಓದಿ ಕಲೆಕ್ಟರ್‌ರಾಗಿ ಇರುವವನಿಗೆ ಪ್ರತಿ ದಿನ ಓದುವ ಅವಕಾಶ ಇರಬಹುದು. ಹಾಗೆಯೇ ಕಡಿಮೆ ಓದು ಇರುವವನಿಗೆ ಕೆಲಸಗಳು ಹೆಚ್ಚಾಗಿದ್ದು ಓದುವ ಅವಕಾಶ ಕಡಿಮೆ ಇರಬಹುದು. ಬಹಳ ಬಾರಿ ಓದುವುದು, ಕಡಿಮೆ ಬಾರಿ ಓದುವುದು ಎನ್ನುವುದಕ್ಕು ಶ್ರದ್ಧೆಗೂ ಸಂಬಂಧವಿಲ್ಲ. ಶ್ರದ್ಧೆ ಎನ್ನುವುದು ಮನುಷ್ಯನ ತಲೆಯಲ್ಲಿ ಗುಣಗಳ ನಡುವೆ ಇರುತ್ತದೆ. ಶದ್ಧೆ ಎಂದರೇ ಇಷ್ಟ ಎಂದು ಕೂಡಾ ಹೇಳಬಹುದು. ಓದುವ ಓದು ಇಷ್ಟವಾದುದು ಆಗಬಹುದು, ಇಷ್ಟವಿಲ್ಲದಿರುವುದು ಆಗಬಹುದು. ತಾನು ಭಗವದ್ಗೀತೆ ಓದಿದ್ದೇನೆ ಎಂದು ಇತರರು ತಿಳಿಯುವುದಕ್ಕೆ ಓದಿದರೆ ಅದು ಶ್ರದ್ಧೆ ಇಲ್ಲದಿರುವುದಾಗುತ್ತದೆ. ಹಾಗಲ್ಲದೆ ನಾನು ಭಗವದ್ಗೀತೆ ಯಲ್ಲಿನ ಸಮಾಚಾರವನ್ನು ತಿಳಿಯಬೇಕೆನ್ನುವ ಇಷ್ಟದಿಂದ (ಶ್ರದ್ಧೆಯಿಂದ) ಓದಿದರೆ ಅದು ಅರ್ಥವಾಗುತ್ತದೆ. ಮನುಷ್ಯನಿಗೆ ಒಂದು ವಿಷಯದ ಮೇಲೆ ಶ್ರದ್ಧೆ ಇರುವಾಗ ಆ ವಿಷಯದಲ್ಲಿ ಮನುಷ್ಯ ತನ್ನ ಬುದ್ಧಿಯನ್ನು ವಿನಿಯೋಗಿಸಿ

ಅಲ್ಲಿರುವ ಸಮಾಚಾರವನ್ನು ತಿಳಿಯಬಲ್ಲನು. ಬುದ್ಧಿಯನ್ನು ಕೇಂದ್ರೀಕರಿಸದಂತೆ ತನ್ನ ಧ್ಯಾಸವನ್ನು ಎಲ್ಲಿಯೋ ಇಟ್ಟುಕೊಂಡು ಓದಿರುವುದಾಗಲಿ, ಕೇಳಿರುವುದಾಗಲಿ, ಯಾವುದು ಸರಿಯಾಗಿ ಅರ್ಥ ಆಗುವುದಿಲ್ಲ. ಯಾವಾಗಾದರೆ ವಿಷಯವನ್ನು ತಿಳಿಯಬೇಕೆಂದು ಶ್ರದ್ಧೆಹೊಂದಿ ಓದಿದಾಗ, ಪ್ರತಿ ಚಿಕ್ಕ ವಿಷಯದಲ್ಲಿಯೂ ಬುದ್ಧಿವೊಂದರ ಸಹಕಾರದಿಂದ ತಿಳಿದು ಓದುವುದರಿಂದ, ಆ ವಿಷಯ ಸಕ್ರಮವಾಗಿ ಅರ್ಥವಾಗುತ್ತದೆ.

ಓದುವ ವಿಷಯದ ಮೇಲೆ ಶ್ರದ್ಧೆ ಇಲ್ಲದಿರುವಾಗ ಆತನು ಇತರರು ನೋಡುವುದಕ್ಕೆ ಮಾತ್ರವೇ ಓದುತ್ತಿದ್ದಾನೆ ಹೊರತು ತಾನು ತಿಳಿಯುವುದಕ್ಕೆ ಅಲ್ಲ. ಅಂತಹವನಿಗೆ ಓದುವ ವಿಷಯದ ಮೇಲೆ ಶ್ರದ್ಧೆ ಇರುವುದಿಲ್ಲ. ಶ್ರದ್ಧೆ ಇಲ್ಲದಿರುವಾಗ ಬುದ್ಧಿ ಕೂಡಾ ಅದನ್ನು ಕುರಿತು ತಿಳಿಯುವುದಿಲ್ಲ. ಆಗ ಓದಿದರೂ ಪ್ರಯೋಜನೆ ಇಲ್ಲ. ಓದಿದ ವಿಷಯ ಮನುಷ್ಯನಿಗೆ ಅರ್ಥ ಆಗುವುದಿಲ್ಲ. ಆದ್ದರಿಂದ ಪರಮಾತ್ಮ ವಿಷಯವಾಗಲಿ, ಪ್ರಪಂಚ ವಿಷಯವಾಗಲಿ ಅರ್ಥವಾಗುವುದಕ್ಕೆ ಶ್ರದ್ಧೆ ಅಗತ್ಯ. ಶ್ರದ್ಧೆಯಿಲ್ಲದವನಿಗೆ ಏನು ತಿಳಿಯುವುದಿಲ್ಲ. ಪ್ರಪಂಚ ವಿಷಯಗಳಲ್ಲಿ ಶ್ರದ್ಧೆಯಿದ್ದರೆ ಓದುವ ವಿಷಯ ಮಾತ್ರ ಅರ್ಥವಾಗುತ್ತದೆ. ಪರಮಾತ್ಮ ವಿಷಯದಲ್ಲಾದರೆ ಗ್ರಂಥದಲ್ಲಿನ ಜ್ಞಾನ ಅರ್ಥವಾಗುವುದೇ ಅಲ್ಲದೇ ಜ್ಞಾನದಲ್ಲಿನ ಶಕ್ತಿ ಕೂಡಾ ಲಭಿಸುವುದು. ಶಕ್ತಿ ಲಭಿಸುವುದಕ್ಕೂ ಕೂಡಾ ಒಂದು ಕಾಲಮಾನ ಶಾಸ್ತ್ರಬದ್ಧವಾಗಿ ಇದೆ. ಆ ವಿಷಯವನ್ನು **"ಅಂತಿಮ ದೈವಗ್ರಂಥ ವಜ್ರ ವಾಕ್ಯಗಳು"** ಎನ್ನುವ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಅಲ್ಲಿ ಓದಿದರೆ ಶ್ರದ್ಧೆ ಎಷ್ಟು ಉಪಯೋಗಪಡುತ್ತಿದೆಯೋ ಅರ್ಥವಾಗುತ್ತದೆ.

**ಪ್ರಶ್ನೆ :– ನೀವು "ದೇವರ ಚಿಹ್ನೆ" ಎಂದು ಒಂದು ಗ್ರಂಥವನ್ನು ಬರೆದು ಅದರಲ್ಲಿ ನಾಲ್ಕು ಚಕ್ರಗಳ ವಿವರವನ್ನು ತಿಳಿಸಿದ್ದಾರೆ. ಈಗ "ದೇವರ ಮುದ್ರೆ" ಎಂದು ಪ್ರತ್ಯೇಕವಾಗಿ ಹೇಳುತ್ತಿದ್ದೀರ. ದೇವರ ಚಿಹ್ನೆ ಎಂದರೂ, ದೇವರ ಮುದ್ರೆ ಎಂದರೂ ಎರಡೂ ಒಂದೇಯೆಂದು ನಾವು ಅಂದುಕೊಳ್ಳುತ್ತಿದ್ದೇವೆ. ನಮ್ಮಮಾತು ವಾಸ್ತವವಾ, ಅಲ್ಲವಾ?**

**ಉತ್ತರ :–** ನಿಮ್ಮ ಮಾತು ವಾಸ್ತವವೇ! **‘ದೇವರ ಚಿಹ್ನೆ’** ಎಂದು ಇದಕ್ಕು ಮೊದಲು ಬರೆದ ಮಾತು ವಾಸ್ತವವೇ. ದೇವರ ಚಿಹ್ನೆ ಇನ್ನೂ ಚೆನ್ನಾಗಿ ಅರ್ಥವಾಗುವುದಕ್ಕೆ ವಿವರಿಸಿ ಬರೆಯಬೇಕೆಂದು ತಿಳಿದು, ಅದನ್ನೇ ಪ್ರತ್ಯೇಕಿಸಿ **‘ದೇವರ ಮುದ್ರೆ’** ಎನ್ನುವ ಹೆಸರಿನಿಂದ ಬರೆಯುತ್ತಿದ್ದೇವೆ. ದೇವರ ಚಿಹ್ನೆಗು, ದೇವರ ಮುದ್ರೆಗು ಇರುವ ವ್ಯತ್ಯಾಸ ಏನೋ ವಿವರಿಸಿ ಹೇಳಬೇಕೆಂದು ಕೊಂಡಿದ್ದೇವೆ. ಆದ್ದರಿಂದ ‘ದೇವರ ಮುದ್ರೆ’ ಎನ್ನುವ ಹೆಸರಿನಿಂದ ಗ್ರಂಥವನ್ನು ಬರೆಯುವುದು ನಡೆಯುತ್ತಿದೆ. ಮುಖ್ಯವಾಗಿ ಹೇಳಿದರೆ ದೇವರ ಚಿಹ್ನೆ, ದೇವರ ಮುದ್ರೆ ಎರಡು ಹೆಸರುಗಳು ಬೇರೆಬೇರೆಯಾಗಿದ್ದರೂ ಅರ್ಥದಲ್ಲಿ ಎರಡೂ ಒಂದೇ. ದೇವರ ಚಿಹ್ನೆಯನ್ನು ಕುರಿತು ಮೊದಲು ಬರೆದ ಗ್ರಂಥದಲ್ಲಿ ವಿವರಿಸಿದ್ದೇವೆ. ಈಗ ಅದೇ ಚಿಹ್ನೆಯನ್ನೇ ದೇವರ ಮುದ್ರೆ ಎನ್ನುವ ಹೆಸರಿನಿಂದ ವಿವರಿಸಬೇಕೆಂದು ಕೊಂಡಿದ್ದೇವೆ. ಹಾಗೆ ಏಕೆ ಎರಡುಸಲ ಹೇಳುತ್ತಾ ಎರಡು ಗ್ರಂಥಗಳಾಗಿ ಬರೆಯಬೇಕಾಗಿ ಬಂದಿದೆ ಎಂದರೇ ಅದಕ್ಕೆ ಸ್ವಲ್ಪ ಕಾರಣ ಇದೆ. ಅದೇನೆಂದರೆ! ನಮ್ಮ ಶರೀರದಲ್ಲಿ ಆತ್ಮ ಇದೆ. ಆತ್ಮ ದೇವರಲ್ಲಿನ ಭಾಗವಾಗಿದೆ. ದೇವರಿಂದ ಆತ್ಮ, ಜೀವಾತ್ಮ ಬಿಡುಗಡೆಯಾಗಿ ಬೇರೆಯಾಗಿ ಇವೆಯೆಂದು ಹೇಳಬಹುದು. ಆತ್ಮ, ಜೀವಾತ್ಮ ದೈವ ಅಂಶ ಹೊಂದಿರುವವಾಗಿದ್ದರೂ ಆತ್ಮ ಕೆಲಸ ಮಾಡುತ್ತದೆ, ಜೀವಾತ್ಮ ಕೆಲಸ ಮಾಡುವುದಿಲ್ಲ. ಜೀವಾತ್ಮಗು, ಆತ್ಮಗು ಎಷ್ಟೋ ವ್ಯತ್ಯಾಸ ಇದೆ. ಆತ್ಮ ದೇವರಂತೆ ಪ್ರವರ್ತಿಸುತ್ತಾ ಎಲ್ಲರಿಗೂ ಅಧಿಪತಿಯಾಗಿದೆ. ಅಧಿಪತಿಯಾಗಿ ಇರುವುದಲ್ಲದೆ ಕಾರ್ಯಕರ್ತನಾಗಿ ಕೆಲಸಗಳು ಮಾಡುತ್ತಿದೆ. ಒಂದು ವಿಧವಾಗಿ ಆತ್ಮ ಶರೀರಕ್ಕು, ಜೀವಿಗು ಅಧಿಪತಿಯಾಗಿದ್ದೂ ಈಶ್ವರನು ಎಂದು ಹೆಸರುವಾಸಿಯಾಗಿದೆ. ದೇವರಿಂದ ಅಧಿಕಾರಹೊಂದಿ, ಸರ್ವರಿಗು ದೇವರಾಗಿರುವುದು ಆತ್ಮವೇ. ಜೀವಿಯ ಕಾರ್ಯಗಳನ್ನು ಮಾಡುತ್ತಾ ದೇವರ ಸ್ಥಾನದಲ್ಲಿ ಆತ್ಮ ಇದೆಯೆಂದು ಆತ್ಮಜ್ಞಾನ ತಿಳಿದ ಯಾವ ಮನುಷ್ಯನಾದರೂ ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಆತ್ಮ ಎಷ್ಟೋ ದೊಡ್ಡ ಸ್ಥಾನದಲ್ಲಿ ದೇವರಹಾಗೆ ಇರುವಂತೆ ದೇವರಿಂದ ಅಧಿಕಾರ ಹೊಂದಿ ದೊಡ್ಡದಾಗಿ ಇರುತ್ತಿದೆ. ನಾನು ಹೇಳುವಮಾತು ನಿಮಗೆ ಅರ್ಥವಾಗದಿದ್ದರೆ ನಂಬಿಕೆ ಇಲ್ಲದಿದ್ದರೆ ಈ

ವಿಷಯವನ್ನು ದ್ವಿತೀಯ ದೈವಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿ 5ನೇ ಅಧ್ಯಾಯದಲ್ಲಿ 20ನೇ ವಾಕ್ಯದಿಂದ 27ನೇ ವಾಕ್ಯದವರೆಗು ಹೇಳಿರುವುದನ್ನು ಗಮನಿಸಿದರೆ ನಾನು ಹೇಳಿದ ಮಾತು ಸತ್ಯವೆಂದು ತಿಳಿಯಬಲ್ಲದು.

## (ಯೋಹಾನ್ 5-20 ರಿಂದ 27 ವರೆಗು)

(5-20) "ತಂದೆ, ಕುಮಾರನನ್ನು ಪ್ರೀತಿಸುತ್ತಾ, ತಾನು ಮಾಡುವವೆಲ್ಲವನ್ನು ಆತನಿಗೆ ವ್ಯಕ್ತಪಡಿಸುತ್ತಿದ್ದಾನೆಂದು ನಿಮ್ಮೊಂದಿಗೆ ನಿಶ್ಚಯವಾಗಿ ಹೇಳುತ್ತಿದ್ದಾನೆ. ಮತ್ತು ನೀವು ಆಶ್ಚರ್ಯಪಡುವಂತೆ ಇವುಗಳಿಗಿಂತ ದೊಡ್ಡ ಕಾರ್ಯಗಳನ್ನು ಆತನಿಗೆ ವ್ಯಕ್ತಪಡಿಸುತ್ತಾನೆ".

(5-21) "ತಂದೆ ಮೃತರನ್ನು ಹೇಗೆ ಎಬ್ಬಿಸಿ ಬದುಕಿಸುತ್ತಾನೊ ಹಾಗೆಯೇ ಕುಮಾರನು ತನಗಿಷ್ಟ ಬಂದರವನ್ನು ಬದುಕಿಸುತ್ತಾನೆ."

(5-22) "ತಂದೆ ಯಾರಿಗೂ ತೀರ್ಪು ಕೊಡುವುದಿಲ್ಲ ಆದರೆ"

(5-23) "ತಂದೆಯನ್ನು ಘನಪಡಿಸುವಂತೆ ಎಲ್ಲರೂ ಕುಮಾರನನ್ನು ಘನಪಡಿಸಬೇಕೆಂದು ತೀರ್ಪು ತೀರಿಸುವುದಕ್ಕೆ ಸರ್ವಾಧಿಕಾರ ಕುಮಾರನಿಗೆ ಒಪ್ಪಿಸಿದ್ದಾನೆ. ಕುಮಾರನನ್ನು ಘನಪಡಿಸದವನು ಆತನನ್ನು ಕಳುಹಿಸಿದ ತಂದೆಯನ್ನು ಘನಪಡಿಸುವುದಿಲ್ಲ".

(5-24) "ನನ್ನ ಮಾತು ಕೇಳಿ ನನ್ನನ್ನು ಕಳಿಸಿದವನಲ್ಲಿ ವಿಶ್ವಾಸ ಇಡುವವನು ನಿತ್ಯಜೀವ ಇರುವವನು, ಅವನು ತೀರ್ಪಿನೊಳಗೆ ಬಾರದೆ ಮರಣದಿಂದ ಜೀವದೊಳಗೆ ದಾಟಿದ್ದಾನೆಂದು ನಿಮ್ಮೊಂದಿಗೆ ನಿಶ್ಚಯವಾಗಿ ಹೇಳುತ್ತಿದ್ದೇನೆ."

(5-25) "ಮೃತರು ದೇವರ ಕುಮಾರನ ಶಬ್ದವನ್ನು ಕೇಳುವ ಸಮಯ ಬರುತ್ತಿದೆ, ಈಗಲೇ ಬಂದಿದೆ. ಅದನ್ನು ಕೇಳುವವರು ಜೀವಿಸುತ್ತಾರೆಂದು ನಿಮ್ಮೊಂದಿಗೆ ನಿಶ್ಚರ್ಯವಾಗಿ ಹೇಳುತ್ತಿದ್ದೇನೆ".

**(5-26) "ತಂದೆ ಹೇಗೊ ತನ್ನಷ್ಟಕ್ಕೆ ತಾನೇ ಜೀವ ಇರುವವನಾಗಿ ಇದ್ದಾನೊ ಹಾಗೆಯೇ ಕುಮಾರನು ಸಹ ತನ್ನಷ್ಟಕ್ಕೆ ತಾನೇ ಜೀವವಿರುವವನಾಗಿ ಇರುವುದಕ್ಕೆ ಕುಮಾರನಿಗೆ ಅಧಿಕಾರವನ್ನು ಅನುಗ್ರಹಿಸಿದನು".**

**(5-27) "ಮತ್ತು ಆತನು ಮನುಷ್ಯ ಕುಮಾರನು ಆದ್ದರಿಂದ ತೀರ್ಪುಕೊಡುವುದಕ್ಕೆ (ತಂದೆ) ಅಧಿಕಾರವನ್ನು ಅನುಗ್ರಹಿಸಿದನು".**

ಈ ವಾಕ್ಯಗಳಲ್ಲಿ ತಂದೆಯೆಂದು ದೇವರನ್ನು, ಕುಮಾರನೆಂದು ಆತ್ಮವನ್ನು ಹೇಳುವುದಾಗಿದೆ. ದೇವರು ಆತ್ಮಗೆ ತನ್ನಂತಿರುವುದಕ್ಕೆ ಎಲ್ಲಾ ವಿಧಗಳ ಅಧಿಕಾರ ಕೊಟ್ಟಿದ್ದಾನೆಂದು ಹೇಳಲ್ಪಟ್ಟಿದೆ. ಅಷ್ಟೇಅಲ್ಲದೆ ಮನುಷ್ಯ ಮರಣಿಸಿದರೆ ಪುನಃ ಕರ್ಮವನ್ನು ನಿರ್ಣಯಿಸಿ ಜನ್ಮಗಳಿಗೆ ಕಳಿಸುವ ಅಧಿಕಾರ ಆತ್ಮಗೆ ಕೊಡಲಾಗಿದೆ. ದೇವರೊಂದಿಗೆ ಸಮಾನವಾಗಿ ಆತ್ಮವನ್ನು ಆರಾಧಿಸಿದವನಿಗೆ, ಗೌರವಿಸಿದವನಿಗೆ ಜನ್ಮಗಳು ಇಲ್ಲದಂತೆ ಮೋಕ್ಷ ಉಂಟಾಗುತ್ತದೆಂದು ಹೇಳುವುದಾಗಿದೆ. ಇನ್ನೂ ದೇವರಂತೆ ಆತ್ಮ ಕೂಡಾ ನಿತ್ಯ ಜೀವ ಇರುವುದಾಗಿ, ಜನನ ಮರಣಗಳು ಇಲ್ಲದಿರುವುದಾಗಿರುವಂತೆ ದೇವರು ಆತ್ಮಗೆ ಅಧಿಕಾರಕೊಟ್ಟಂತೆ ಇದೆ. ಮನುಷ್ಯರು ಆತ್ಮವನ್ನು ದೇವರಂತೆ ಗೌರವಿಸಬೇಕೆಂದು ಕೂಡಾ ಹೇಳುವುದಾಗಿದೆ. ಇದೆಲ್ಲವೂ ನೋಡಿದ ನಂತರ ಆತ್ಮ ಮನುಷ್ಯರೆಲ್ಲರಿಗೂ ದೇವರಾಗಿ ಇದೆಯೆಂದು ಹೇಳುತ್ತಿದ್ದೇವೆ. ದೇವರೊಂದಿಗೆ ಸಮಾನವಾಗಿರುವ ಆತ್ಮ ಮನುಷ್ಯನಿಗೆ ಕಾರ್ಯಕರ್ತನಾಗಿ ಕೆಲಸ ಮಾಡಿಡುತ್ತಿದೆ ಎಂದರೇ ಯಾರಾದರೂ ನಂಬುತ್ತಾರಾ? ಒಂದುಕಡೆ ಎಷ್ಟೋ ಉನ್ನತವಾಗಿ ಕಾಣಿಸುವ ಆತ್ಮ ಜೀವಿಗೆ ಸೇವಕನಾಗಿ ಕಾರ್ಯಗಳನ್ನು ಮಾಡಿಡುವುದಾ! ಎಂದು ಆಶ್ಚರ್ಯ ಹೋಗುವುದು ತಪ್ಪುವುದಿಲ್ಲ. ನನ್ನ ಮಾತು ನಂಬದೆಹೋದರೆ ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ಸೂರಾ ಆರರಲ್ಲಿ, ಆಯತ್ 102ರಲ್ಲಿ ಏನು ಹೇಳಿದ್ದಾರೊ ಒಂದುಸಲ ನೋಡಿರಿ.

**(6-102) "ಆಯನೇ ಅಲ್ಲಾಹ್ ನಿಮ್ಮ ಪ್ರಭು. ಆತನು ಹೊರತು ಮತ್ತೊಂದು**

**ಆರಾಧ್ಯ ದೈವ ಇಲ್ಲ. ಆತನೇ ಸರ್ವಕ್ಕೆ ಸೃಷ್ಟಿಕರ್ತ ಆದ್ದರಿಂದ ನೀವು ಆತನನ್ನೇ ಆರಾಧಿಸಿರಿ. ಅಷ್ಟೇಅಲ್ಲದೆ ಆತನು ಪ್ರತಿಯೊಂದಕ್ಕು ಕಾರ್ಯಕರ್ತ",**

ಇದು 'ದಿವ್ಯ ಖುರ್‌ಆನ್ ಸಂದೇಶ' ತೆಲುಗು ಅನುವಾದದಲ್ಲಿ ಹೇಳಲ್ಪಟ್ಟಿದೆ. ಈ ವಾಕ್ಯವನ್ನು ಓದಿದ ಬಹಳಜನ ಅಲ್ಲಾಹ್ ಎಂದರೇ ದೇವರಾಗಿಯೇ ಅರ್ಥ ಮಾಡಿಕೊಂಡು ಆತ್ಮವನ್ನು ಬಿಟ್ಟುಹಾಕುವ ಅವಕಾಶವಿದೆ. ಇಲ್ಲಿ 'ದೇವರು' ಎನ್ನುವ ಪದವನ್ನು ಆತ್ಮವಾಗಿ ಅರ್ಥ ಮಾಡಿಕೊಳ್ಳಬೇಕು. ಹಾಗಲ್ಲ ಅಲ್ಲಾಹ್ (ದೇವರ) ವಿಷಯವನ್ನೇ ಆ ವಾಕ್ಯದಲ್ಲಿ ಹೇಳಿದ್ದಾನೆಂದು ಕೆಲವರು ವಾದಿಸಬಹುದು. ನನಗೆ ವಾದನೆಯಿಂದ ಕೆಲಸವಿಲ್ಲ, ಇರುವ ಸತ್ಯವನ್ನು ಹೇಳುವುದೇ ನನ್ನ ಕರ್ತವ್ಯ. ಅಲ್ಲಾಹ್ ಎಂದರೇ ದೇವರೆ ಆದರೆ ಆತನು ಸಾಕ್ಷಿಯಾಗಿ ಇರುವವನು ಎಂದು ಮಾತ್ರವೇ ತಿಳಿಯಬೇಕು. ದೇವರು ಮನುಷ್ಯನಿಗೆ ಕೆಲಸ ಮಾಡಿಡುವ ಕೆಲಸದವನಾಗಿ ಇಲ್ಲ. ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನು ಎಂದು ಜ್ಞಾಪಕ ಇಟ್ಟುಕೊಳ್ಳಬೇಕು. ದೇವರು ಸಾಕ್ಷಿಯಾಗಿ ಇದ್ದಾನೆಂದು ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ಸೂರಾ 50, ಆಯತ್ 21ರಲ್ಲಿ ಹೇಳಿದ್ದಾರೆ ನೋಡಿರಿ.

(50-20) **"ಪ್ರತಿ ಜೀವಾತ್ಮ (ಪ್ರಾಣಿ) ಒಬ್ಬ ನಡೆಸುವವನೊಂದಿಗೆ ಮತ್ತೊಬ್ಬ ಸಾಕ್ಷಿಕೊಡುವವನೊಂದಿಗೆ ಸಹ ಬರುತ್ತದೆ.**

ಈ ವಾಕ್ಯವು ಗ್ರಂಥದಲ್ಲಿ ಚಿಕ್ಕ ವಾಕ್ಯವಾದರೂ ಅತ್ಯಂತ ಪ್ರಾಧಾನ್ಯತೆ ಇರುವ ವಾಕ್ಯ. ದೈವಗ್ರಂಥಗಳು ಮೂರು ಈ ವಾಕ್ಯದಿಂದ ಮುಡಿಹಾಕಲ್ಪಟ್ಟಿವೆ. ಮುಖ್ಯವಾಗಿ ಮೂವರು ಯಾರೋ ತಿಳಿಯುವುದಕ್ಕೇ ದೈವಗ್ರಂಥಗಳು ಮೂರು ಹೇಳಲ್ಪಟ್ಟಿವೆ. ಪ್ರಥಮ ದೈವಗ್ರಂಥ ತೌರಾತ್ (ಭಗವದ್ಗೀತೆ) ಗ್ರಂಥದಲ್ಲಿ **ಕ್ಷರನು, ಅಕ್ಷರನು, ಪುರುಷೋತ್ತಮನೆಂದು ಹೇಳಿದಾಗ** ದ್ವೀತಿಯ ದೈವಗ್ರಂಥ ಇಂಜೀಲ್ (ಬೈಬಲ್) ನಲ್ಲಿ **"ತಂದೆ, ಕುಮಾರನು, ಪರಿಶುದ್ಧಾತ್ಮ"**. ಎಂದು ಹೇಳಿದಾಗ, ಅಂತಿಮದೈವಗ್ರಂಥ ಖುರ್‌ಆನ್‌ನಲ್ಲಿ **"ನಡೆಸುವವನು, ನಡೆಸಲ್ಪವವನು,**

**ಸಾಕ್ಷಿಯಾಗಿರುವವನು."** ಎಂದು ಹೇಳಲಾಗಿದೆ. ಈ ಮೂರು ವಾಕ್ಯಗಳು ಗ್ರಂಥಗಳಿಗೆ ಮೂಲಾಧಾರ ಎನ್ನುವ ವಿಷಯ ನಾವು ಹೇಳುವವರೆಗು ಯಾರಿಗೂ ತಿಳಿಯದಂತೆ ಹೋಗಿದೆ.

ಮನುಷ್ಯನಲ್ಲಿರುವ ಶ್ರದ್ಧೆಯನ್ನು ಅನುಸರಿಸಿ ಬುದ್ಧಿ ವಿಚಕ್ಷಣೆ ಬಂದಾಗ, ಬುದ್ಧಿ ವಿಚಕ್ಷಣೆಯಿಂದ ದೈವಗ್ರಂಥ ವಾಕ್ಯ ಅರ್ಥವಾಗುತ್ತದೆ. ಖುರ್‌ಆನ್ ಗ್ರಂಥದಲ್ಲಿ ಸೂರಾ 5 ಆಯತ್ 68ರಲ್ಲಿ ಮೂರು ದೈವಗ್ರಂಥಗಳು ಓದದೆ ನೀವು ಯಾವ ಧರ್ಮದಲ್ಲಿಯೂ ಇಲ್ಲದಂತೆ ಎಂದು ಹೇಳಿದ್ದಾರೆ ನೋಡಿರಿ.

(5-68) **"ಓ ಗ್ರಂಥವಾಹಕರೇ! ನೀವು ತೌರಾತ್‌ನ್ನು, ಇಂಜೀಲನ್ನು, ನಿಮ್ಮ ಪ್ರಭು ಕಡೆಯಿಂದ ನಿಮ್ಮ ಹತ್ತಿರಕ್ಕೆ ಕಳಿಸಲ್ಪಟ್ಟ ಖುರ್‌ಆನ್ ಗ್ರಂಥವನ್ನು ನಿಮ್ಮ ಜೀವನದಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದ ಮೇಲೆ ಇಲ್ಲದಂತೆ."**

ಇಲ್ಲಿ ಹೇಳಿದಂತೆ ಮೂರು ದೈವಗ್ರಂಥಗಳನ್ನು ಓದಿದಾಗಲೇ ದೇವರ ಜ್ಞಾನ ಅರ್ಥವಾಗುತ್ತದೆ. ಆಗ ನೀನು ಒಂದು ಧರ್ಮದಲ್ಲಿ ಇದ್ದಂತಾಗುತ್ತದೆ. ಹಾಗಲ್ಲದೆ ಮಧ್ಯದಲ್ಲಿ ಬಂದಿರುವ ಮತವನ್ನು ಹಿಡಿದುಕೊಂಡು ಮೊದಲಿನಿಂದಿ ಇರುವ ದೇವರನ್ನು ಮರೆತು ನನ್ನ ಗ್ರಂಥ, ನನ್ನ ಮತ ಎನ್ನುವುದರಿಂದ ಮನುಷ್ಯ ದೇವರ ಜ್ಞಾನವನ್ನು ಸತ್ಯಸ್ವರೂಪವಾಗಿ ತಿಳಿಯಲಾರದೆ ಹೋಗುತ್ತಿದ್ದಾನೆ. ವಾಸ್ತವ ಜ್ಞಾನವನ್ನು ತಿಳಿದರೆ ದೇವರು ಕೆಲಸ ಮಾಡುವವನಲ್ಲ. ದೇವರು ತನ್ನ ಆತ್ಮವನ್ನು ಪ್ರಜೆಗಳಿಗೆ ದೇವರಾಗಿ ಮತ್ತು ಸೇವಕನಾಗಿ (ಕಾರ್ಯಕರ್ತನಾಗಿ) ನೇಮಿಸಿ ಪಕ್ಕದಲ್ಲಿ ನೋಡುತ್ತಿದ್ದಾನೆ. ಆತ್ಮವೇ ದೇವರಂತೆ ಇದೆ. ಆದ್ದರಿಂದ (6–102) ವಾಕ್ಯದಲ್ಲಿ ಹೇಳಿದಂತೆ ಆತನೇ (ಆತ್ಮವೇ) ಮನುಷ್ಯರಿಗೆ ದೇವರಾಗಿ ಆತ್ಮವಿದ್ದೂ ಮತ್ತು ಆತ್ಮವೇ ಮನುಷ್ಯರಿಗೆ ಕಾರ್ಯಕರ್ತನಾಗಿರುತ್ತಾ ಜೀವಿಗೆ ಸುಖದುಃಖಗಳನ್ನು ಒದಗಿಸುತ್ತಿದೆ. ಈ ವಿಧವಾಗಿ ಆತ್ಮ ಮನುಷ್ಯನ ಕಡೆ ಎರಡು ವಿಧಗಳಾಗಿ ಇದೆಯೆಂದು ಹೇಳಬಹುದು.

'ಆತ್ಮ' ದೇವರಾಗಿದೆಯೆಂದು ಹೇಳಿದ್ದೇವೆ ಅಲ್ಲವೆ! ಈಗ ದೇವರ ಮುದ್ರೆಯನ್ನು ಕುರಿತು ಹೇಳುತ್ತಿದ್ದೇವೆ ಎಂದರೇ, ಅದು 'ಆತ್ಮ ಮುದ್ರೆ' ಯನ್ನು ಕುರಿತು ಹೇಳುತ್ತಿದ್ದೇವೆಂದೇ ಅರ್ಥ. ದೈವಗ್ರಂಥದ ಪ್ರಕಾರ ಯಾವ ಮನುಷ್ಯನಾದರೂ ಆತ್ಮವನ್ನು ದೇವರಾಗಿ ಹೇಳಿಕೊಳ್ಳದೆಹೋದರೆ ದೇವರ ಮಾತನ್ನು ಅತಿಕ್ರಮಿಸಿದಂತಾಗುತ್ತದೆ. ದೇವರಿಗೆ ಮನುಷ್ಯನ ಮೇಲೆ ಕೋಪ ಉಂಟಾಗಬಹುದು. **'ಕುಮಾರನಾದ ಆತ್ಮವನ್ನು ಘನಪಡಿಸದವನು ದೇವರನ್ನು ಕೂಡಾ ಘನಪಡಿಸುವುದಿಲ್ಲವೆಂದು'** ಬೈಬಲ್‌ನಲ್ಲಿ ಹೇಳಿದ ವಾಕ್ಯವನ್ನು ಮರೆಯಬಾರದು. ಆದ್ದರಿಂದ ಪ್ರತಿ ಮನುಷ್ಯ ತಂದೆಯಾದ ದೇವರನ್ನು ಕುರಿತು ಆಲೋಚಿಸದೆ, ಕುಮಾರನಾದ ಆತ್ಮವನ್ನು ಕುರುತೇ ಆಲೋಚಿಸಬೇಕು. ಆತ್ಮವನ್ನೇ ದೇವರಾಗಿ ತಿಳಿಯಬೇಕು. ಆತ್ಮವನ್ನು ದೇವರಾಗಿ ಆರಾಧಿಸಬೇಕು. ಈ ಮಾತುಗಳೆಲ್ಲ ದೇವರೇ ಸ್ವತಃವಾಗಿ ಯೋಹಾನ್ ಸುವಾರ್ತೆಯಲ್ಲಿ ಹೇಳಿದ್ದಾನೆ. ಮನುಷ್ಯರಿಗೆ ಆತ್ಮ ದೇವರಾಗಿ ಉನ್ನತ ಸ್ಥಿತಿಯಲ್ಲಿದ್ದರೂ, ಅತ್ಯುನ್ನತ ಸ್ಥಿತಿಯಲ್ಲಿದ್ದರೂ ಮತ್ತೊಂದು ವಿಧವಾಗಿ ಆತ್ಮವೇ ಮನುಷ್ಯನಿಗಿಂತ ಕಡಿಮೆಯಾಗಿ, ಮನುಷ್ಯನಿಗೆ ಸೇವಕನಾಗಿ, ಕೆಲಸದವನಾಗಿ ಕೂಡಾ ಇದ್ದಾನೆಂದು ಹೇಳಬಹುದು. ಹೀಗೆ ಆತ್ಮ ಮನುಷ್ಯನಿಗೆ ಎರಡು ವಿಧಗಳಾಗಿ ಇದೆಯೆಂದು, ಅಸಲಾದ ದೇವರು ಎಂದರೇ ಆತ್ಮಗೆ ತಂದೆಯಾಗಿರುವ ದೇವರು, ನಮಗೆ (ಜೀವಾತ್ಮಗೆ) ತಾತನಾಗಿರುವ ದೇವರು ಮನುಷ್ಯರೊಂದಿಗೆ ಸಂಬಂಧ ಇಲ್ಲದೆ ಪಕ್ಕದಲ್ಲಿ ಸಾಕ್ಷಿಯಾಗಿದ್ದಾನೆ. ಆತನು ಮನುಷ್ಯರ ಪರಧಿಯಲ್ಲಿ ಇಲ್ಲ. ಆದ್ದರಿಂದ ತಾತನಾದ ದೇವರನ್ನು ತಿಳಿಯುವುದಕ್ಕೆ ತಂದೆಯಾದ ಆತ್ಮವನ್ನು ದೇವರಾಗಿ ತಿಳಿಯಬೇಕು. ದೇವರಾಗಿ ಗೌರವಿಸಬೇಕು. ದೇವರಾಗಿ ಆರಾಧಿಸಬೇಕು.

ನಮಗೆ ದೇವರಾದ ಆತ್ಮ ಮನುಷ್ಯರಿಗೆ ಎರಡು ವಿಧಗಳಾಗಿ ಪ್ರವರ್ತಿಸುವುದು ಈಗ ತಿಳಿದುಹೋಗಿದೆ. ಆದ್ದರಿಂದ ದೇವರ ಗುರುತನ್ನು ದೇವರ ಚಿಹ್ನೆಯೆಂದು ಒಂದು ವಿಧ, ದೇವರ ಮುದ್ರೆಯೆಂದು ಮತ್ತೊಂದು ವಿಧ ಹೇಳಿಕೊಳ್ಳುತ್ತಿದ್ದೇವೆ. ಇದಕ್ಕು ಮೊದಲು ದೇವರ ಗುರುತನ್ನು **"ದೇವರ**

**ಚಿಹ್ನೆ"** ಎನ್ನುವ ಗ್ರಂಥವಾಗಿ ಬರೆದು ತೋರಿಸಿದ್ದೇವೆ. ಆ ಗ್ರಂಥದಲ್ಲಿ ದೇವರ ಗುರುತನ್ನು ಒಂದು ವಿಧವಾದ ಭಾವನೆಯಿಂದ ಪೂರ್ತಿಯಾಗಿ ವಿವರಿಸಿದ್ದೇವೆ. ಆಗುರುತನ್ನು ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗ ಎನ್ನುವ ಅಧ್ಯಾಯದೊಳಗಿನಿಂದ ಕಂಡುಕೊಂಡಿದ್ದೇನೆ ಎಂದು ಹೇಳಿದ್ದೇವೆ. **"ದೇವರ ಚಿಹ್ನೆ"** ಎನ್ನುವ ಗ್ರಂಥದಲ್ಲಿ ದೇವರ ಚಿಹ್ನೆಯನ್ನು ಕುರಿತು ಸಂಪೂರ್ಣವಾಗಿ ಹೇಳುತ್ತಾ, ದೇವರ ಚಿಹ್ನೆಯನ್ನು ದೇವರಿಗೆ ಸಮಾನವಾಗಿ ಗೌರವಿಸಬೇಕು ಆದ್ದರಿಂದ ಅದನ್ನು **"ತಲೆಮೇಲೆ ಹಣೆಯ ಭಾಗದಲ್ಲಿ ಧರಿಸಿದರೇ ಇತರರು ನೋಡುವುದಕ್ಕೆ ಅದನ್ನು ತಲೆಮೇಲೆ ಇಟ್ಟುಕೊಂಡು ಹೊತ್ತಹಾಗೆ ಕಾಣಿಸುತ್ತದೆ"** ಎನ್ನುವ ಭಾವನೆಯಿಂದ ಎಲ್ಲರೂ ದೇವರ ಚಿಹ್ನೆಯನ್ನು ಹಣೆಭಾಗದಲ್ಲಿ ಧರಿಸಬೇಕೆಂದು ಹೇಳಿದ್ದೇವೆ. ಆದಿನ ಒಂದು ಹಿಂದೂಗಳಿಗೇ ಅಲ್ಲದೆ ಎಲ್ಲಾ ಮತದವರಿಗು ಅದು ದೇವರ ಗುರುತಾಗಿ ಇರುವುದರಿಂದ ಎಲ್ಲಾ ಮತಗಳ ಮನುಷ್ಯರು ಅದನ್ನು ಗೌರವ ಭಾವನೆಯಿಂದ ನೋಡುವುದಲ್ಲದೇ ದೇವರೊಂದಿಗೆ ಸಮಾನವಾಗಿ ನೋಡಬೇಕೆಂದು ಕೂಡಾ ಹೇಳಿದ್ದೇವೆ.

ನಾವು ಹೇಳಿದ ನಂತರ ಅರ್ಥಮಾಡಿಕೊಂಡವರೆಲ್ಲರೂ ದೇವರ ಚಿಹ್ನೆಯನ್ನು ಹಣೆಯ ಭಾಗದಲ್ಲಿ ಧರಿಸುವುದು ನಡೆದಿದೆ. ನನ್ನ ಮಾತನ್ನು ಅರ್ಥ ಮಾಡಿಕೊಂಡ ಹಿಂದೂಗಳೇ ಅಲ್ಲದೆ ಮುಸ್ಲಿಮ್‌ರು, ಕ್ರೈಸ್ಥರು ಕೆಲವರು ಧರಿಸುವುದು ನಡೆದಿದೆ. ವಾಸ್ತವವಾಗಿ ದೇವರ ಚಿಹ್ನೆಗು ಹಿಂದೂಗಳಿಗು ಯಾವುದೇ ಸಂಬಂಧವಿಲ್ಲ. ಅದು ಮೂರು ಮತದವರಿಗೆ ಸಂಬಂಧಿಸಿರುವುದು. ಹುಟ್ಟಿದ ಪ್ರತಿ ಮನುಷ್ಯ, ದೇವರು ಎನ್ನುವ ಭಾವನೆ ಇರುವ ಪ್ರತಿ ಮನುಷ್ಯ ಅದನ್ನು ಧರಿಸಿ ತೀರಲೇಬೇಕು. ಆದರೇ ಕ್ರೈಸ್ಥರಿಗು, ಮುಸ್ಲಿಮ್‌ರಿಗು ಮುಖದ ಮೇಲೆ ಏನು ಧರಿಸುವ ಅಭ್ಯಾಸವಿಲ್ಲ. ಅವರ ಮತ ನಿಯಮಗಳ ಪ್ರಕಾರ ಮುಖದ ಮೇಲೆ ಹಿಂದೂಗಳಂತೆ ಏನು ಧರಿಸಬಾರದೆಂದು ಹೇಳಿದ್ದಾರೆ. ಮೊದಲು ಹುಟ್ಟಿದ ಹಿಂದೂಗಳನ್ನು ನೋಡಿ ಹಿಂದೆ ಹುಟ್ಟಿದ ಮತಕ್ಕೆ ಪ್ರಾಧಾನ್ಯತೆಗಾಗಿ ಹಾಗೆ ಹೇಳಿದ್ದಾರೆಂದು, ಅದು ಕೇವಲ ಮತ ನಿಯಮವೆಂದು,

ದೇವರ ಜ್ಞಾನ ಅಲ್ಲವೆಂದು ಅರ್ಥವಾಗುತ್ತಿದೆ. ದೇವರ ವಿಷಯ ಮೂರು ದೈವ ಗ್ರಂಥಗಳಲ್ಲಿ ಒಂದಾಗಿದ್ದರೂ ಅದು ಮನುಷ್ಯರಿಗೆ ಅರ್ಥವಾಗದೆ ಇರುವುದರಿಂದ ದೈವಗ್ರಂಥದಲ್ಲಿನ ಜ್ಞಾನವನ್ನುಬಿಟ್ಟು, ಮತ ನಿಯಮಕ್ಕೇ ಮನುಷ್ಯ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಿದ್ದಾನೆ.

ಮೂರು ದೈವ ಗ್ರಂಥಗಳಲ್ಲಿ ದೇವರ ಚಿಹ್ನೆಯನ್ನು ಕುರಿತು ಬರೆಯಲ್ಪಟ್ಟಿದೆ. ಭಗವದ್ಗೀತೆಯಲ್ಲಿ ಸೂಕ್ಷ್ಮವಾಗಿ ಅಕ್ಷರ ಪರಬ್ರಹ್ಮಯೋಗದಲ್ಲಿ ದೇವರ ಚಿಹ್ನೆಯನ್ನು ಕುರಿತು ಹೇಳಿರುವಾಗ, ಬೈಬಲ್‌ನಲ್ಲಿಯೂ ಖುರ್‌ಆನ್ ಗ್ರಂಥದಲ್ಲಿಯೂ ಸ್ಥೂಲವಾಗಿ ಕಾಣಿಸುವ ವಾಕ್ಯಗಳನ್ನೇ ಹೇಳಿದ್ದಾರೆ. ಗೀತೆಯಲ್ಲಿ ಸೂಕ್ಷ್ಮವಾಗಿರುವುದನ್ನು ನಾವು ಹೇಳಿದಾಗ, ಹಿಂದೂಗಳು ಗ್ರಹಿಸಿ ಕೂಡಲೆ ದೇವರ ಮುದ್ರೆಯನ್ನು ಹಣೆಯ ಭಾಗದಲ್ಲಿ ಧರಿಸಿದ್ದಾರೆ. ಕ್ರೈಸ್ಥರು, ಮುಸ್ಲಿಮ್‌ರು ನಮ್ಮ ಮಾತನ್ನು ತಕ್ಷಣ ಅರ್ಥಮಾಡಿಕೊಳ್ಳದೆ ಹೋಗಿದ್ದಾರೆ. ಸ್ವಲ್ಪ ಅರ್ಥವಾದರೂ ಮತಕ್ಕೆ ಭಯಪಟ್ಟು ಅವರು ಹಣೆಯ ಮೇಲೆ ದೇವರ ಮುದ್ರೆಯನ್ನು ಧರಿಸಲಿಲ್ಲ. ನಂತರ ಸ್ವಲ್ಪ ಕಾಲಕ್ಕೆ ಅವರು ದೇವರ ಜ್ಞಾನವನ್ನು ಅರ್ಥ ಮಾಡಿಕೊಂಡಿದ್ದಾರೆ. ಅವರ ಗ್ರಂಥಗಳಲ್ಲಿ ಪ್ರತ್ಯಕ್ಷವಾಗಿರುವ ದೇವರ ವಾಕ್ಯಗಳನ್ನು ಗೌರವಿಸುವ ಸಲುವಾಗಿ ಮೊದಲು ಮುಸ್ಲಿಮ್‌ರು ದೇವರ ಮುದ್ರೆಯನ್ನು ಧರಿಸಿದಾಗ, ನಂತರ ಕ್ರೈಸ್ಥರು ದೇವರ ಮುದ್ರೆಯನ್ನು ಮುಖದ ಮೇಲೆ ಧರಿಸಿದ್ದಾರೆ. ದೇವರ ಚಿಹ್ನೆಯನ್ನು ಕುರಿತು ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ಸೂರಾ ಐದು, ಆಯತ್ ಎರಡರಲ್ಲಿಯೂ, ಮತ್ತೊಂದು ಕಡೆ ಸೂರಾ 22, ಆಯತ್ 32 ರಲ್ಲಿಯೂ ಸ್ಥೂಲವಾಗಿ ಹೇಳಿದ್ದಾರೆ. ಈಗ (22–32) ವಾಕ್ಯವನ್ನು ನೋಡೋಣ.

**"ಯಾರಾದರೆ ಅಲ್ಲಾಹ್ ನೇಮಿಸಿದ ಚಿಹ್ನೆಗಳನ್ನು ಗೌರವಿಸುತ್ತಾನೊ ಅದು ನಿಶ್ಚಯವಾಗಿ ಅವರ ಹೃದಯಗಳಲ್ಲಿ ಇರುವ ದೈವಭೀತಿಯಿಂದಲೇ"** ಎಂದು ಬರೆಯಲ್ಪಟ್ಟಿದೆ. ಆದರೇ ಅಲ್ಲಿ ಹೇಳಿದ ವಿಷಯ ಬಹಳಜನ ಮುಸ್ಲಿಮ್‌ರಿಗೆ ಅರ್ಥವಾಗಲಿಲ್ಲ. ಅವರಿಗೆ ಅರ್ಥವಾಗಿರುವುದು ತಪ್ಪು ಮಾರ್ಗ. ದೇವರು ಸೂಕ್ಷ್ಮವಾದವನು, ದೇವರ ಜ್ಞಾನ ಕೂಡಾ ಸೂಕ್ಷ್ಮದಿಂದ ಕೂಡಿಕೊಂಡಿರುತ್ತದೆ.

ದೇವರು ತನ್ನ ಚಿಹ್ನೆಯನ್ನು ಕುರಿತು ಹೇಳಿದರೆ ಮನುಷ್ಯ ಪ್ರಕೃತಿ ಸಂಬಂಧ ಗುರುತುಗಳನ್ನು ದೇವರ ಚಿಹ್ನೆಗಳಾಗಿ ಹೇಳುವುದು ತಪ್ಪು ಅಲ್ಲವೆ! ದೇವರು ಬೇರೆ, ಪ್ರಕೃತಿ ಬೇರೆ. ಪ್ರಕೃತಿ ಸಂಬಂಧ ಯಾವುದಾಗಲಿ ದೇವರ ಗುರುತುಗಳಾಗಿ ಇರುವುದಕ್ಕೆ ಸಾಧ್ಯವಿಲ್ಲ. ದೇವರಿಗೆ ಪ್ರತ್ಯರ್ಥಿಯಾಗಿರುವುದು ಪ್ರಕೃತಿ. ಪ್ರಕೃತಿಯಿಂದ ತಯಾರಾಗಿರುವುದು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಈ ಐದನ್ನು ಪ್ರಕೃತಿಯೆಂದು ಕರೆಯುತ್ತೇವೆ. ಪ್ರಕೃತಿಯಿಂದಲೇ ನಮ್ಮ ಶರೀರದಲ್ಲಿನ ಗುಣಗಳು ಕೂಡಾ ಹುಟ್ಟಿವೆ. ಆದ್ದರಿಂದ ಗುಣಗಳು ಪ್ರಕೃತಿ ಜನಿತಗಳು ಎನ್ನುತ್ತೇವೆ. ಗುಣಗಳನ್ನೇ **ಮಾಯೆ** ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಮಾಯೆಯನ್ನೇ **ಸಾತಾನ್** ಎಂದು **ಸೈತಾನ್** ಎಂದು **ಇಬ್ಲೀಸು** ಎಂದು ಹೇಳುತ್ತಿದ್ದೇವೆ. ಆದ್ದರಿಂದ ಪ್ರಕೃತಿಯನ್ನು ದೇವರೊಳಗೆ ಬೆರೆಸಬಾರದು. ಹೊರಗೆ ಪ್ರಪಂಚದಲ್ಲಿ ಭೂಮಿಯಲ್ಲಿ ಹುಟ್ಟಿದ ಸಫಾ, ಮರ್ವಾಗಳೆನ್ನುವ ಎರಡು ಪರ್ವತಗಳನ್ನು ದೇವರ ಗುರುತಾಗಿ ಕೆಲವರು ಹೇಳಿದರೂ ಅದು ಸ್ವಲ್ಪವಾದರೂ ಸತ್ಯವಲ್ಲ. ಅಷ್ಟೇಅಲ್ಲದೆ ಪ್ರಕೃತಿಯಿಂದ ತಯಾರಾದ ಶರೀರವಿರುವ ಪಶುಗಳನ್ನು ದೇವರ ಚಿಹ್ನೆಯಾಗಿ ಹೇಳಿದ್ದಾರೆ. ಅದು ಕೂಡಾ ಸತ್ಯವಲ್ಲ. ಪಶುಗಳು, ಪರ್ವತಗಳು ಪ್ರಕೃತಿಯಲ್ಲಿನ ಭಾಗಗಳಾಗಿವೆ. ಪ್ರಕೃತಿಯಲ್ಲಿ ಭಾಗವಲ್ಲದೆ ದೇವರ ಜ್ಞಾನದಿಂದ ಕೂಡಿಕೊಂಡಿರುವವೇ ದೇವರ ಚಿಹ್ನೆಗಳಾಗುತ್ತವೆ. ಪ್ರಕೃತಿಯಿಂದ ಕೂಡಿಕೊಂಡಿರುವವು ಎಂದಿಗೂ ದೇವರ ಚಿಹ್ನೆಗಳು ಅಲ್ಲ.

ಭಗವದ್ಗೀತೆಯಲ್ಲಿನ ಜ್ಞಾನವನ್ನು ಅನುಸರಿಸಿ ಮತ್ತು ಖುರ್ಆನ್ ಗ್ರಂಥದಲ್ಲಿ ಅಲ್ಲಾಹ್ ಹೇಳಿದ ಜ್ಞಾನವನ್ನು ಅನುಸರಿಸಿ ಮೊದಲು ನಾವು ಬರೆದ **"ದೇವರ ಚಿಹ್ನೆ"** ಗ್ರಂಥದಲ್ಲಿ ಬರೆಯುವುದು ನಡೆದಿದೆ. ಆಗ ಬೈಬಲ್ ಗ್ರಂಥದಲ್ಲಿನ ವಾಕ್ಯವನ್ನು ಸ್ವಲ್ಪವೂ ನಾವು ಹೇಳಲಿಲ್ಲ. ಇಂಜೀಲು ಗ್ರಂಥದಲ್ಲಿ ದೇವರ ಚಿಹ್ನೆಯನ್ನು ಕುರಿತು ಪ್ರತ್ಯೇಕವಾಗಿ ವಾಕ್ಯವಿದ್ದರೂ ಅದನ್ನು ಅಲ್ಲಿ ಪ್ರಸ್ತಾವನೆಗೆ ತೆಗೆದುಕೊಂಡು ಬರಲಿಲ್ಲ. ಆಗ ಎರಡು ದೈವಗ್ರಂಥಗಳಲ್ಲಿನ ವಾಕ್ಯಗಳನ್ನು ಹೇಳಿದರೂ ಪ್ರತ್ಯಕ್ಷವಾಗಿರುವ ವಾಕ್ಯ ಖುರ್ಆನ್ ಗ್ರಂಥದೊಳಗಿನದೇ.

ಭಗವದ್ಗೀತಾ ಗ್ರಂಥದಲ್ಲಿ ಪ್ರತ್ಯಕ್ಷ ವಾಕ್ಯವಾಗಿ ದೇವರ ಚಿಹ್ನೆಯನ್ನು ಕುರಿತು ಇಲ್ಲ. ಪರೋಕ್ಷವಾಗಿ ಇದೆಯೆಂದು ಹೇಳಿದ್ದೇವೆ ಆದರೆ ಪ್ರತ್ಯಕ್ಷವಾಗಿ ವಾಕ್ಯವನ್ನು ತೋರಿಸಲಿಲ್ಲ. ಪ್ರತ್ಯಕ್ಷವಾಗಿ ಖುರ್‌ಆನ್ ವಾಕ್ಯವನ್ನೇ ತೋರಿಸಿದ್ದೇವೆ. ಅಷ್ಟೇಅಲ್ಲದೆ **"ದೇವರ ಚಿಹ್ನೆ"** ಎನ್ನುವ ಗ್ರಂಥದಲ್ಲಿ ದೇವರ ಚಿಹ್ನೆಯನ್ನು ಕುರಿತು ಸವಿವರವಾಗಿ ಹೇಳಿದ್ದೇನೆ. ದೇವರ ಚಿಹ್ನೆ ನಾಲ್ಕು ಚಕ್ರಗಳ ಗುರುತಾಗಿ ಪ್ರತಿ ಶರೀರದಲ್ಲಿ ಇದೆಯೆಂದು ಹೇಳಿದ್ದೇವೆ. ಪ್ರತಿ ಶರೀರದಲ್ಲಿ ಹಣೆಯ ಭಾಗಕ್ಕೆ ಸಮತಲದಲ್ಲಿ ತಲೆ ಮಧ್ಯ ಭಾಗದಲ್ಲಿ ದೇವರ ಚಿಹ್ನೆ ಇದೆಯೆಂದು ಹೇಳುವುದೇ ಅಲ್ಲದೆ, ದೇವರ ಚಿಹ್ನೆ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳಾಗಿ ಇದೆಯೆಂದು ಹೇಳುತ್ತಾ ಪ್ರತಿ ಚಕ್ರಕ್ಕು ಜ್ಞಾನ ಸಂಬಂಧವಾದ ವಿವರವನ್ನು ಹೇಳಿದ್ದೇವೆ. ಆ ಪ್ರಕಾರ ಮನುಷ್ಯನಾದ ಪ್ರತಿಯೊಬ್ಬನಿಗು, ಶರೀರವನ್ನು ಧರಿಸಿದ ಪ್ರತಿ ಜೀವಿಗು ದೇವರ ಚಿಹ್ನೆ ಜೀವನವನ್ನು ನೇಮಿಸಿ ನಡೆಸುವ ಸಾರಾಂಶವಾದ ಚಿಹ್ನೆಯಾಗಿದೆ. ದೇವರ ಚಿಹ್ನೆಯಲ್ಲಿ ಖುರ್‌ಆನ್ ಗ್ರಂಥದಲ್ಲಿ ಹೇಳಿದ ಜ್ಞಾನ ಮತ್ತು ಭಗವದ್ಗೀತೆಯಲ್ಲಿ ಹೇಳಿದ ಜ್ಞಾನ ಒಳಗೊಂಡಿದೆ. ದೇವರ ಜ್ಞಾನವನ್ನು ನಾವು ಹೇಳಿದಂತೆ ಅರ್ಥ ಮಾಡಿಕೊಂಡರೆ ಪ್ರಥಮ, ಅಂತಿಮ ದೈವಗ್ರಂಥಗಳಲ್ಲಿರುವ ಜ್ಞಾನ ಸಾರಾಂಶ ದೇವರ ಚಿಹ್ನೆಯಲ್ಲಿ ಕಾಣಿಸುತ್ತದೆ. ಮನುಷ್ಯ ಮಾಡಿಕೊಳ್ಳುತ್ತಿರುವ ಕರ್ಮವನ್ನು ಕುರಿತು, ಮನುಷ್ಯನು ಅನುಭವಿಸುವ ಅನುಭವಗಳನ್ನು ಕುರಿತು ಮನುಷ್ಯ ತಿಳಿಯುವ ಜ್ಞಾನವನ್ನು ಕುರಿತು, ಮನುಷ್ಯ ಅನುಭವಿಸುವ ಕಾಲವನ್ನು ಕುರಿತು, ಮನುಷ್ಯನಲ್ಲಿ ಗುಣ ರೂಪದಲ್ಲಿರುವ ಮಾಯೆಯನ್ನು ಕುರಿತು ದೇವರ ಚಿಹ್ನೆಯಲ್ಲಿ ತಿಳಿಯುತ್ತಿದೆಯೆಂದು ನಾವು ಬರೆದ ಗ್ರಂಥದಲ್ಲಿ ಬರೆಯುವುದು ನಡೆದಿದೆ.

ನಾವು ಸುಮಾರು ವರ್ಷದ ಕೆಳಗೆ ಬರೆದ ದೇವರ ಚಿಹ್ನೆಯಲ್ಲಿ ದೇವರ ಚಿಹ್ನೆಯನ್ನು ಕುರಿತು ಸಂಪೂರ್ಣ ಜ್ಞಾನವನ್ನು ತಿಳಿಸುವುದಾಗಿದೆ. ಸಂಪೂರ್ಣವಾಗಿ ಸಂಶಯ ಇಲ್ಲದಂತೆ ತಿಳಿಯಬೇಕಾಗಿರುವುದು ಏನು ಇಲ್ಲದಂತೆ ಹೇಳಿದಾಗ, ಈಗ ನೀವೇ ಇನ್ನೂ ದೇವರ ಚಿಹ್ನೆಯನ್ನು ಕುರಿತು ಹೇಳಬೇ

ಕಾಗಿರುವುದು ಬಹಳ ಇದೆಯೆಂದು ಪ್ರತ್ಯೇಕಿಸಿ ಒಂದು ಗ್ರಂಥವನ್ನೇ ಬರೆಯುತ್ತಿದ್ದೀರಲ್ಲ! ಈಗ ಯಾವುದನ್ನು ಕುರಿತು ಬರೆಯುತ್ತಿದ್ದೀರ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನನ್ನ ಹತ್ತಿರ ಉತ್ತರ ಇದೆ, ಅದು ಏನೆಂದರೇ! ದೇವರನ್ನು ಕುರಿತು ಗುರುತಾಗಿರುವುದನ್ನೇ ದೇವರ ಚಿಹ್ನೆ ಎಂದು, ದೇವರ ಮುದ್ರೆಯೆಂದು ಕರೆಯುತ್ತಿದ್ದೇವೆ. ದೇವರ ಮುದ್ರೆ ದೇವರಿಗೆ ಸಮಾನವಾದ ಸಾರಾಂಶ ಇರುವುದಾಗಿಯೂ, ದೇವರ ಜ್ಞಾನಕ್ಕೆ ಗುರುತಾಗಿಯೂ ಇರುತ್ತಿದೆಯೆಂದು ಹೇಳಬಹುದು. ಮನುಷ್ಯರಾದ ನಾವು ದೇವರು ಎಂದು ಅಸಲಾದ ದೇವರನ್ನು ಅನ್ನಬಾರದು. ಅಂದರೇ ತಾತನಾಗಿರುವ ದೇವರನ್ನು, ಅಥವಾ ತಂದೆಗೆ ತಂದೆಯಾಗಿರುವ ದೇವರನ್ನು ಸ್ವಲ್ಪಸಮಯ ಪಕ್ಕಕ್ಕಿಟ್ಟು ಆತ್ಮವನ್ನೇ ದೇವರಾಗಿ ಹೇಳಿಕೊಳ್ಳೋಣ. ಆತ್ಮವನ್ನು ದೇವರೆಂದು ಹೇಳುವುದು ತಪ್ಪಲ್ಲ. ಸೃಷ್ಠಿಕರ್ತನಾದ ದೇವರೇ ತನ್ನ ಕುಮಾರನಾದ ಆತ್ಮವನ್ನು ತನ್ನಂತೆ ದೊಡ್ಡದಾಗಿ ಹೇಳಬೇಕೆಂದು, ಆರಾಧಿಸಬೇಕೆಂದು, ಗೌರವಿಸಬೇಕೆಂದು ಧರ್ಮಸಮ್ಮತ ಮಾಡಿ ದ್ವಿತಿಯ ದೈವಗ್ರಂಥವಾದ ಇಂಜೀಲ್‌ನಲ್ಲಿ ಹೇಳಿದ ಮಾತನ್ನು ಮರೆಯಬಾರದು. **ಆತ್ಮವನ್ನು ಘನಪಡಿಸದವನು ಆತನನ್ನು ಕಳುಹಿಸಿದ ದೇವರನ್ನು ಕೂಡಾ ಘನಪಡಿಸುವುದಿಲ್ಲ** ಎಂದು ದೇವರೇ ಸ್ವತಃವಾಗಿ ಹೇಳಿದ ಮಾತನ್ನು ಮರೆಯಬಾರದು.

ದೇವರನ್ನು ಘನಪಡಿಸುವವನು, ದೇವರ ಕುಮಾರನಾದ ಆತ್ಮವನ್ನು ಕೂಡಾ ಘನಪಡಿಸಬೇಕು. ದೇವರ ಸ್ಥಾನದಲ್ಲಿ ಆತ್ಮವನ್ನು ದೇವರಾಗಿಯೇ ಮನುಷ್ಯರಾದ ನಾವು ಹೇಳಬೇಕು. ಈಗ ಅಸಲು ವಿಷಯಕ್ಕೆ ಬರೋಣ. ಆತ್ಮ ಮನುಷ್ಯರ ಬಗ್ಗೆ ಎರಡು ವಿಧಗಳಲ್ಲಿ ಪ್ರವರ್ತಿಸುತ್ತಿದೆ. ಒಂದು ದೇವರಾಗಿ, ಎರಡು ಕಾರ್ಯಕರ್ತನಾಗಿ ಇರುವುದರಿಂದ ಆತ್ಮವನ್ನು ಎರಡು ವಿಧಗಳ ಗುರುತುಗಳಿಂದ ಹೇಳಬೇಕು. ದೇವರ ಗುರುತು (ಆತ್ಮ ಗುರುತು) ಒಂದೇ ಆದರೂ ಎರಡು ವಿಧಗಳ ಅರ್ಥದಿಂದ ಕೂಡಿಕೊಂಡಿದೆ. ಆತ್ಮ ಒಂದೇ ಆದರೂ ಎರಡು ವಿಧಗಳಲ್ಲಿ ಪ್ರವರ್ತಿಸುವುದರಿಂದ ದೇವರ ಗುರುತನ್ನು

ಎರಡು ವಿಧಗಳ ಅರ್ಥದಿಂದ ಹೇಳಬೇಕಾಗಿದೆ. ಒಂದೇ ಗುರುತನ್ನೇ ದೇವರ ಚಿಹ್ನೆ ಎಂದು ಒಂದು ವಿಧವಾಗಿ, ದೇವರ ಮುದ್ರೆ ಎಂದು ಮತ್ತೊಂದು ವಿಧವಾಗಿ ಹೇಳುತ್ತಿದ್ದೇವೆ. ಚಿಹ್ನೆ ಎಂದರೂ, ಮುದ್ರೆ ಎಂದರೂ ಎರಡೂ ದೇವರ ಗುರುತೇ ಎಂದು ತಿಳಿಯಬೇಕು. ಇದಕ್ಕು ಮೊದಲ ಗ್ರಂಥದಲ್ಲಿ **"ದೇವರ ಚಿಹ್ನೆ"** ಎನ್ನುವ ಹೆಸರಿನಿಂದ ದೇವರ ಕಾರ್ಯಕರ್ತ ವಿಧಾನವನ್ನು ಹೇಳಿದ್ದೇವೆ. ಈಗ ದೇವರ ಅಧಿಕಾರ ವಿಧಾನವನ್ನು ಕುರಿತು ಹೇಳಿಕೊಳ್ಳೋಣ. ದೇವರ ನಿಜ ಸ್ವರೂಪವು ದೇವರ ಈಶ್ವರ ತತ್ತ್ವವೇ, ಅಂದರೇ ದೇವರ ದೊಡ್ಡತನವೇ. ದೇವರು ಸರ್ವರಿಗು ಅಧಿಪತಿಯಾಗಿದ್ದಾನೆ ಆದ್ದರಿಂದ, ಆತನ ಆಧಿಪತ್ಯಕ್ಕೆ ಗುರುತಾಗಿ ದೇವರ ಮುದ್ರೆಯನ್ನು ಕುರಿತು ಈಗ ಹೇಳಿಕೊಳ್ಳಬೇಕಾಗಿದೆ.

**ಪ್ರಶ್ನೆ :– ಪ್ರಪಂಚ ಹುಟ್ಟಿದಾಗಿನಿಂದ ದೇವರು ಒಬ್ಬನೇಯೆಂದು ಸರ್ವಮಾನವರು ನಂಬುತ್ತಿದ್ದಾರೆ. ಒಂದು ಹಿಂದೂಮತದಲ್ಲಿನವರು ಕೆಲವರು ದೇವರು ಎನ್ನುವ ಅಂಶವನ್ನೇ ತೆಗೆದುಕೊಳ್ಳದೆ ದೇವತೆಗಳನ್ನು ಎಲ್ಲರನ್ನು ನಂಬಿ ಆರಾಧಿಸುತ್ತಿದ್ದಾರೆ. ಹಿಂದೂಗಳಲ್ಲಿ ಕೂಡಾ ಕೆಲವರು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯನ್ನು ಓದಿ ದೈವಜ್ಞಾನವನ್ನು ತಿಳಿದವರಾಗಿ ದೇವತೆಗಳ ಭಕ್ತಿಯನ್ನು ಬಿಟ್ಟು ದೇವರ ಭಕ್ತಿಯನ್ನು ಆಚರಿಸುತ್ತಿದ್ದಾರೆ. ಉಳಿದ ಕ್ರೈಸ್ಥರಲ್ಲಾಗಲಿ, ಮುಸ್ಲಿಮ್‌ರಲ್ಲಾಗಲಿ ಉಳಿದವರನ್ನು ಯಾರನ್ನು ನಂಬದೆ ತಮ್ಮ ವಿಶ್ವಾಸವನ್ನು ದೇವರ ಮೇಲೆ ಮಾತ್ರವೇ ಇಟ್ಟುಕೊಂಡು ದೇವರೊಬ್ಬನನ್ನೇ ಆರಾಧಿಸುತ್ತಿದ್ದಾರೆ. ಪ್ರಜೆಗಳನ್ನು ಪಾಲಿಸುವವನು ಪ್ರಜೆಗಳಿಗೆ ಅಧಿಪತಿಯಾಗಿರುವವನು ಒಬ್ಬ ದೇವರೇಯೆಂದು ತಾವು ನಂಬುವುದೇ ಅಲ್ಲದೆ ಇತರರಿಗೆ ಕೂಡಾ ಬೋಧಿಸುತ್ತಿದ್ದಾರೆ. ತಮ್ಮ ನಂಬಿಕೆ ಪ್ರಕಾರ ದೇವರು ಒಬ್ಬನೇ ಇದ್ದಾನೆಂದು ದೇವರನ್ನೊಬ್ಬನನ್ನೇ ಆರಾಧಿಸುತ್ತಿದ್ದಾರೆ. ಎಲ್ಲರ ಮನಸ್ಸಿನಲ್ಲಿ ಒಂದೇ ದೇವರ ಜ್ಞಾಪಕ ಇದೆ. ಎಲ್ಲಾರ ಬುದ್ಧಿಯಲ್ಲಿ ಒಂದೇ ದೇವರ ಭಾವನೆ ಇದೆ. ದೇವರು ತನ್ನ ಗ್ರಂಥಗಳಲ್ಲಿ ತನ್ನನ್ನು ಒಬ್ಬನನ್ನೇ ಆರಾಧಿಸಿರೆಂದು ಹೇಳಿದಂತಿದೆ. ದೇವರನ್ನು ಕುರಿತು ಎಷ್ಟೋಜನ ಜ್ಞಾನಿಗಳು ತಮ್ಮ ಜ್ಞಾನದ ಪ್ರಕಾರ 'ಏಕೊ ನಾರಾಯಣ' ಎಂದು ಹಿಂದೂಗಳು, 'ಅಲ್ಲಾಹ್ ಮಾಲಿಕ್ (ದೇವರೇ ಯಜಮಾನ)'**

**ಎಂದು ಮುಸ್ಲಿಮ್‌ರು, 'ದೇವರು ಒಬ್ಬನೇಯೆಂದು' ಕ್ರೈಸ್ಥರು ಹೇಳುತ್ತಿರುವಾಗ, ಇಷ್ಟು ಕಾಲ ಜ್ಞಾನಿಗಳಲ್ಲಿರುವ ನಂಬಿಕೆಯನ್ನು ಅಲ್ಲಗಳೆದು ದೇವರು ಒಬ್ಬನಲ್ಲ ಇಬ್ಬರು ಎಂದು ಹೇಳುವುದಲ್ಲದೆ, ಅಸಲಾದ ದೇವರು ನಿಮಗೆ ತಾತನಾಗುತ್ತಾನೆ, ನಿಮಗೆ ದೇವರು ತಂದೆಯಾಗಿದ್ದಾನೆ ಎಂದು ನೀವು ಹೊರತು ಯಾರೂ ಹೇಳಲಿಲ್ಲ. ನೀನೊಬ್ಬನು ಹೇಳಿದ ಮಾತನ್ನು ನಾವೇತಕ್ಕೆ ನಂಬಬೇಕು? ನಮ್ಮ ದೇವರು ಒಬ್ಬನೇ, ಆತನೇ ನಮ್ಮ ಯಜಮಾನ, ಆತನೇ ನಮ್ಮನೆಲ್ಲರನ್ನು ಹುಟ್ಟಿಸಿದ ತಂದೆಯೆಂದು ನಂಬುತ್ತಿದ್ದೇವೆ. ಅದೇ ನಂಬಿಕೆಯಿಂದ ಜೀವಿಸುತ್ತೇವೆ. ಅದೇ ನಂಬಿಕೆಯನ್ನೇ ಮುಂದುವರೆಸಿಕೊಳ್ಳುತ್ತೇವೆ. ನೀವು ಹೇಳಿದ ಮಾತನ್ನು ಕೇಳಿ ಮಧ್ಯದಲ್ಲಿ ನಾವು ಕೆಟ್ಟುಹೋಗುವುದಿಲ್ಲ ಎಂದು ಹೇಳುತ್ತಿದ್ದೇವೆ. ಇಷ್ಟುಜನರಿಗೆ ದೇವರು ಒಬ್ಬನೇ ಕಾಣಿಸಿದರೆ ನಿನಗೊಬ್ಬನಿಗೆ ದೇವರು ಎರಡಾಗಿ ಹೇಗೆ ಕಾಣಿಸಿದ್ದಾನೆ? ಎಂದು ಕೇಳುತ್ತಿದ್ದೇವೆ.**

**ಉತ್ತರ :–** ಇಲ್ಲಿಯವರೆಗು ನೀವು ನಂಬಿದ ದೇವರನ್ನು ನಾನು ಇಲ್ಲ ಎನ್ನಲಿಲ್ಲ. ಇಲ್ಲಿಯವರೆಗು ಎಲ್ಲರೂ ತಂದೆಯೆಂದು ಯಾವ ದೇವರನ್ನು ಕರೆಯುತ್ತಿದ್ದೀರೊ ಅದೇ ದೇವರನ್ನು ನಾನು ಕೂಡಾ ತಂದೆಯೇ ಅನ್ನುತ್ತಿದ್ದೇನೆ. ಇಲ್ಲಿಯವರೆಗು ದೇವರು ಒಬ್ಬನೇಯೆಂದು ಯಾವ ದೇವರನ್ನು ನೀವು ಕರೆಯುತ್ತಿದ್ದೀರೊ ಆ ದೇವರನ್ನು ಅಲ್ಲಗಳೆಯಲಿಲ್ಲ. ಎಲ್ಲರ ನಂಬಿಕೆ ಯಾವ ದೇವರ ಮೇಲೆ ಇದೆಯೊ ಆ ದೇವರನ್ನೇ ನಾನು ದೃಢಪಡಿಸುತ್ತಿದ್ದೇನೆ. ಯಾವ ದೇವರನ್ನಾದರೆ ಮುಸ್ಲಿಮ್‌ರು ಒಬ್ಬನೇಯೆಂದು ಹೇಳುತ್ತಿದ್ದಾರೊ, ಒಬ್ಬನೇಯೆಂದು ಕ್ರೈಸ್ಥರು ಕರೆಯುತ್ತಿದ್ದಾರೊ ಆ ದೇವರನ್ನೇ ನಾನು ಧೃಢೀಕರಿಸಿ ಹೇಳುತ್ತಿದ್ದೇನೆ. ಆದರೇ ಇಲ್ಲಿಯವರೆಗು ಯಾರೂ ಹೇಳದ ಮತ್ತೊಂದುಮಾತನ್ನು ಕೂಡಾ ಹೇಳುತ್ತಿದ್ದೇನೆ. ನೀವು ಹೇಳುತ್ತಿರುವ ದೇವರು, ನೀವು ನಂಬಿದ ದೇವರು ವಾಸ್ತವವೇ ಆದರೆ ನೀವು ಅಂದುಕೊಂಡಂತೆ ಯಾರಾದರೆ ದೇವರಾಗಿದ್ದಾನೋ ಆತನಿಗೆ ತಂದೆ ಒಬ್ಬನಿದ್ದಾನೆಂದು ನಮಗೆ ತಿಳಿದಿಲ್ಲ. ನಿಜವಾದ ದೇವರನ್ನು ಕುರಿತು ಯಾರಿಗೂ ತಿಳಿದಿಲ್ಲ. ನಿಜವಾದ ದೇವರು ನಮಗೆ ತಂದೆಯಾದವನಿಗೆ ತಂದೆಯಾಗಿದ್ದಾನೆ.

**ಆತನು ಆರು ದಿನಗಳು ತನ್ನ ಸೃಷ್ಟಿಯನ್ನು ಸೃಷ್ಟಿಸಿ ಏಳನೆ ದಿನ ಏಳನೆ ಆಕಾಶದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾನೆಂದು** ಅಂತಿಮ ದೈವ ಗ್ರಂಥದಲ್ಲಿ ಹೇಳಿದ ಮಾತನ್ನು ಮರೆತು ನೀವು ಮಾತನಾಡುತ್ತಿದ್ದೀರ. ದೇವರು ನಾಮ, ರೂಪ, ಕ್ರಿಯಾರಹಿತನು. ದೇವರು ಎಂದರೆ ಹುಡುಕಲ್ಪಡುವವನು, ದೇವರು ಯಾರ ಊಹೆಗು ಸಿಗದವನು. ಆತನನ್ನು ಯಾರೂ ಇಂತಹವನೆಂದು ಹೇಳಲಾರರು. ಆತನು ಎಲ್ಲಾ ಕೆಲಸಗಳಿಗು ಅತೀತನು, ಯಾವ ಕಾರ್ಯವನ್ನು ಮಾಡದವನು, ಸಾಕ್ಷಿಯಾಗಿ ನೋಡುತ್ತಿದ್ದಾನೆ. ಮನುಷ್ಯನನ್ನು ಹುಟ್ಟಿಸುವುದರಲ್ಲಿಯೂ, ಪಾಲಿಸುವುದರಲ್ಲಿಯೂ, ಮರಣಿಸುವಂತೆ ಮಾಡುವುದರಲ್ಲಿಯೂ ಯಾವ ಪ್ರಮೇಯ ಇಲ್ಲದವನು. ದೇವರನ್ನು ಎಷ್ಟು ಪ್ರಯತ್ನಿಸಿದರೂ ಯಾರೂ ಕಂಡುಕೊಂಡಲಾರರು ಎಂದು ಹೇಳಬಹುದು. ಎಲ್ಲರಿಗೂ ತಿಳಿಯದ ಅತ್ಯಂತ ರಹಸ್ಯವೊಂದು ಇದೆ, ಅದೇನೆಂದರೆ! ದೈವಗ್ರಂಥಗಳಲ್ಲಿ ದೇವರಿಗೆ ಸಂಬಂಧಿಸಿದ ಜ್ಞಾನ ವಿಷಯಗಳು ಎಷ್ಟು ಇದ್ದರೂ ಅದರಲ್ಲಿ ಕೇವಲ ಶೇ.ಹತ್ತರಷ್ಟು ಮಾತ್ರವೇ ಪರಮಾತ್ಮನನ್ನು ಕುರಿತು ಹೇಳಿದ ಜ್ಞಾನವಿರುತ್ತದೆ. ಉಳಿದ ಶೇ.ತೊಂಭತ್ತ (90) ರಷ್ಟು ಜ್ಞಾನ ವಿಷಯಗಳು ಆತ್ಮಕ್ಕೆ ಸಂಬಂಧಿಸಿರುವವು ಇರುತ್ತವೆ.

ದೈವ ಗ್ರಂಥಗಳಲ್ಲಿ ಅತ್ಯಂತ ಪ್ರಾಮುಖ್ಯವಾದ ಜ್ಞಾನ ಸಮಾಚಾರ ದೇವರು ಮೂರು ವಿಧಗಳಾಗಿ ಇದ್ದಾನೆಂದು ಹೇಳುವುದೇ ಅಲ್ಲದೆ, ಹೇಳದೆಯೇ ನಾಲ್ಕು ವಿಧಗಳಾಗಿ ಇದ್ದಾನೆಂದು ತನ್ನ ಗ್ರಂಥಗಳಲ್ಲಿ ತಿಳಿಸಿದ್ದಾನೆ. ದೇವರು ಒಬ್ಬನೇಯೆಂದು ತಿಳಿದ ನಿಮಗೆ ವಾಸ್ತವವಾಗಿ, ಸತ್ಯಬದ್ಧವಾಗಿ, ಶಾಸ್ತ್ರ ಸಮ್ಮತವಾಗಿ ಮೂರು+ಒಂದು=ನಾಲ್ಕು ವಿಧಗಳು ಇದ್ದಾನೆಂದು ನಾವು ಹೇಳುವುದು ಎಲ್ಲರಿಗೂ ನುಂಗಲಾರದ ವಿಷಯವೆಂದು ಎಂದು ನನಗೆ ತಿಳಿದಿದೆ. ಆದರೂ ಸತ್ಯ ಪ್ರಕಟಣೆ ಯಾವಾಗಲೋ ಒಂದುಸಲ, ಎಲ್ಲಿಯೋ ಒಂದುಕಡೆ, ಯಾರೊ ಒಬ್ಬರು ಹೇಳದೆ ತಪ್ಪುವುದಿಲ್ಲ. ಆ ಏರ್ಪಾಟು ಎಲ್ಲವೂ ದೇವರ ನಿರ್ಣಯದಲ್ಲಿಯೇ ಇರುತ್ತದೆ. ದೇವರ ನಿರ್ಣಯ ಮನುಷ್ಯನನ್ನು ತನ್ನಕಡೆ ಕರೆಸಿಕೊಳ್ಳುವುದಕ್ಕಾದರೂ ಇರುತ್ತದೆ, ಇಲ್ಲವೆ ತನಗೆ ದೂರವಾಗಿ ಕಳಿಸುವು

ದಕ್ಕಾದರೂ ಇರುತ್ತದೆ. ದೇವರು ಅಂತಿಮ ದೈವಗ್ರಂಥದಲ್ಲಿ ಬಹಳಸಲ ಅಲ್ಲಾಹ್ ಅಂದುಕೊಂಡರೆ ಮನುಷ್ಯನನ್ನು ಸನ್ಮಾರ್ಗದಲ್ಲಾದರೂ ಕಳಿಸುತ್ತಾನೆ. ಹಾಗೆಯೇ ಅಪಮಾರ್ಗದಲ್ಲಾದರೂ ಕಳಿಸುತ್ತಾನೆ. ಅಲ್ಲಾಹ್ ತನ್ನನ್ನು ವಿಶ್ವಾಸಿಸಿದವರನ್ನು ಸನ್ಮಾಮಾರ್ಗದಲ್ಲಿಯೂ, ತನ್ನನ್ನು ವಿಶ್ವಾಸಿಸದವನನ್ನು ಅಪಮಾರ್ಗ (ಅಜ್ಞಾನ ಮಾರ್ಗದಲ್ಲಿ) ದಲ್ಲಿಯೂ ಕಳಿಸುತ್ತಾನೆ ಎಂದು ಹೇಳಿದ್ದಾನೆ. ಮನುಷ್ಯನಿಗೆ ದೇವರ ಜ್ಞಾನ ಅರ್ಥವಾಗಬೇಕೆಂದರೆ ದೇವರ ಇಷ್ಟದ ಮೇಲೆ ಆಧಾರಪಟ್ಟಿರುತ್ತದೆ. ಮನುಷ್ಯನ ವಿಶ್ವಾಸವನ್ನನುಸರಿಸಿ ದೇವರ ನಿರ್ಣಯವಿರುತ್ತದೆ.

ಮೇಲಿನ ವಿಷಯಗಳೆಲ್ಲ ಹೇಳಿದವನು ಸರ್ವರಿಗು ತಂದೆಯಾದ ದೇವರೆಯೆಂದು ತಿಳಿಯಬೇಕು. ಸರ್ವರಿಗು ತಾತನಾದ ದೇವರು ಏನು ಹೇಳಲಿಲ್ಲ. ಆತನು ಏನು ಹೇಳುವವನಲ್ಲ. ಆತನು ಮೌನವಾಗಿ ಎಲ್ಲಾ ಮಾಡುತ್ತಾ ಇರುವವನು ಮಾತ್ರವೇ. ಇಲ್ಲಿಯವರೆಗು ದೇವರ ಜ್ಞಾನ ತಿಳಿದವರು ಅಂದುಕೊಂಡ ಜ್ಞಾನಿಗಳಿಗೆಲ್ಲರಿಗೂ ನಾವು ಒಂದು ಸತ್ಯವನ್ನು ಹೇಳಿ, ಸ್ವಲ್ಪ ಗೊಂದಲಕ್ಕೆ ಗುರಿ ಮಾಡಿದ್ದರೂ, ನನ್ನನ್ನು ನೀವು ಸತ್ಯ ಹೇಳುವವನಾಗಿ ಗ್ರಹಿಸಬೇಕು. ಸತ್ಯ ಸ್ವಲ್ಪ ಕಹಿಯಾಗಿದ್ದರೂ ಸತ್ಯ ಎಂದಿಗೂ ಸತ್ಯವೇ. ಆದ್ದರಿಂದ ಶಾಶ್ವತವಾಗಿ, ಸತ್ಯವಾಗಿರುವ ವಿಷಯವನ್ನು ಹೇಳಿದರೆ, ದೇವರು ಒಬ್ಬನೇ ಆದರೂ ಒಟ್ಟಾರೆ ನಾಲ್ಕು ಭಾಗಗಳಾಗಿ ಇದ್ದಾನೆ. ವಾಸ್ತವವನ್ನು ಹೇಳಿದರೇ ದೇವರು ಎಂದಿಗೂ ದೇವರಾಗಿಯೇ ಇದ್ದಾನೆ. ದೇವರಾಗಿರುವ ಆತ್ಮ ಒಂದು ಇದೆ. ನಂತರ ಮೂರನೆಯದಾಗಿ ಜೀವಾತ್ಮ ಇದೆ. ಈ ಮೂರು ಅಲ್ಲದಿರುವುದು ಪ್ರಕೃತಿಯೆಂದು ಒಂದು ಇದೆ. ಈ ನಾಲ್ಕು ಭಾಗಗಳು ಒಂದೇ ದೇವರೊಳಗಿನವೇ, ಆ ಒಬ್ಬ ದೇವರೇ ತಾತನಾದ ದೇವರು. ತಂದೆ ತಂದೆಯಾದ ದೇವರು ನಿಮಗೆ ವಿವರವಾಗಿ ಅರ್ಥವಾಗುವದಕ್ಕೆ ಈಗ ಒಂದು ಕಥೆಯಂತಹ ಸಮಾಚಾರವನ್ನು ಹೇಳುತ್ತೇನೆ ಜಾಗ್ರತೆಯಾಗಿ ಕೇಳಿರಿ.

ನಾನು ಸಾಧಾರಣ ಮನುಷ್ಯನಾಗಿದ್ದೂ ಯಾವ ಜ್ಞಾನ ತಿಳಿಯದ ಯುಕ್ತ ವಯಸ್ಸಿನಲ್ಲಿಯೇ ಆಗಾಗ ಇತರರೊಂದಿಗೆ ದೇವರ ವಿಷಯಗಳನ್ನು

ಕುರಿತು ಮಾತನಾಡುತ್ತಿದ್ದೆನು. ಆಗ ಭಗವದ್ಗೀತೆಯನ್ನು ಓದಿದ ನಂತರ ದೇವರು ತ್ರೈತ ಸಿದ್ಧಾಂತವಾಗಿ ಇದ್ದಾನೆಂದು ತಿಳಿದಿದೆ. ಆದರೇ ವಿಶೇಷವೇನೆಂದರೆ ನಾನು ಭಗವದ್ಗೀತೆಯನ್ನು ಓದದ ಕಾಲದಲ್ಲಿ ಕೂಡಾ, ಭಗವದ್ಗೀತೆ ವಿಷಯ ತಿಳಿಯದಿರುವಾಗಲೂ ಕೂಡಾ, ದೇವರು ಮೂರು ಭಾಗಗಳಾಗಿ ಇದ್ದಾನೆಂದು ಹೇಳುತ್ತಿದ್ದೆನು. ಭಗವದ್ಗೀತೆ ಓದಿದ ನಂತರ ದೇವರು ಮೂರು ಆತ್ಮಗಳಾಗಿ ಇದ್ದಾನೆಂದ ಅರ್ಥವಾಗಿದೆ. ಅದನ್ನೇ ನಾನು ಮೊದಲಿನಿಂದ ಹೇಳುವುದರಿಂದ ಅದು ನನ್ನ ಸಿದ್ಧಾಂತವಾಗಿ ಪ್ರಜೆಗಳಿಗೆ ತೋರಿಸಿ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿ ಹೇಳಿದ್ದೇನೆ. ಆದರೇ ತ್ರೈತ ಸಿದ್ಧಾಂತವನ್ನು ಮೊದಲೇ ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ್ದಾನೆ. ಆದರೂ ಅದು ಇಲ್ಲಿಯವರೆಗು ಯಾರಿಗೂ ತಿಳಿಯದಿರುವುದರಿಂದ ಆ ಸಿದ್ಧಾಂತವನ್ನು ನಾನು ಪ್ರಚಾರ ಮಾಡಿದ್ದೇನೆ. ವಿಚಿತ್ರ ಏನೆಂದರೇ ಭಗವದ್ಗೀತೆಯನ್ನು ಓದಿದ ನಂತರ ಮೂರು ಆತ್ಮಗಳ ವಿಷಯ ತಿಳಿದರೂ ಕ್ಷರನು, ಅಕ್ಷರನು, ಪುರುಷೋತ್ತಮನು ಎಂದು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ಬರೆದಿದ್ದರೂ, ಪ್ರತ್ಯಕ್ಷವಾಗಿ ಶ್ಲೋಕಗಳ ರೂಪದಲ್ಲಿ ಮೂರು ಆತ್ಮಗಳ ವಿಷಯವಿದ್ದರೂ, ಪರೋಕ್ಷವಾಗಿ ದೇವರು ನಾಲ್ಕು ಭಾಗಗಳಾಗಿ ಇದ್ದಾನೆಂದು ಭಗವದ್ಗೀತೆ ಒಟ್ಟಾರೆ ವಿಷಯ ತಿಳಿದಿದೆ. ಆದರೇ ಆ ವಿಷಯ ನನಗೆ ಚೆನ್ನಾಗಿ ಅರ್ಥವಾದರೂ ನಾನ ಮೊದಲು ಹೇಳಿದ ತ್ರೈತ ಸಿದ್ಧಾಂತವನ್ನೇ ಹೇಳುತ್ತಾ ಬಂದಿದ್ದೇನೆ. ಮಧ್ಯದಲ್ಲಿ ಎರಡನೆ ಸಲ ನಾಲ್ಕು ಭಾಗಗಳಾಗಿ ದೇವರಿದ್ದಾನೆಂದು ಹೇಳಿ ಅವರನ್ನು ಗೊಂದಲದಲ್ಲಿ ಇಡಬಾರದೆಂದುಕೊಂಡಿದ್ದೇನೆ. ಕೆಲವು ವರ್ಷಗಳು ಕಳೆದ ನಂತರ ಬಹಳಜನ ನನ್ನ ಹತ್ತಿರಕ್ಕೆ ಬಂದು ನಾನು ಹೇಳುವ ಜ್ಞಾನವನ್ನು ಕೇಳುತ್ತಿದ್ದರು. ಆಗ ನಾನು ಜ್ಞಾನವನ್ನು ಹೇಳುವುದೇ ಅಲ್ಲದೆ, ಪ್ರತಿ ತಿಂಗಳು ಅವರಿಗೆ ಜ್ಞಾನ ಪರೀಕ್ಷೆ ನಿರ್ವಹಿಸುತ್ತಿದ್ದೆನು. ಜ್ಞಾನ ಪರೀಕ್ಷೆಯಲ್ಲಿ ಬಹಳಜನ ಪಾಲ್ಗೊಳ್ಳುತ್ತಿದ್ದರು. ಪ್ರತಿ ತಿಂಗಳು ನಡೆಯುವ ಪರೀಕ್ಷೆಗಳಲ್ಲಿ ಹತ್ತು ಪ್ರಶ್ನೆಗಳನ್ನು ಹೇಳಿ, ಅವುಗಳಿಗೆ ಜ್ಞಾನವನ್ನು ಉತ್ತರವಾಗಿ ಬರೆಯಿರೆಂದು ಹೇಳುತ್ತಿದ್ದೆನು ಬಹುಶಃ 2001 ಅಥವಾ 2002ನೇ ವರ್ಷದಲ್ಲಿ ನಡೆದ ಜ್ಞಾನ

ಪರೀಕ್ಷೆಯಲ್ಲಿ ಹತ್ತು ಪ್ರಶ್ನೆಗಳಲ್ಲಿ ಮೊದಲ ಪ್ರಶ್ನೆ ನನಗೆ ಚೆನ್ನಾಗಿ ಜ್ಞಾಪಕವಿದೆ. ಅದು ಏನೆಂದರೆ! **"ಸೃಷ್ಠಿ ಆದಿಯಲ್ಲಿ ಒಂದೇ ದೇವರು ಎಷ್ಟು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ?"** ಎಂದು ಕೇಳಿದ್ದೇವೆ. ಆ ಪ್ರಶ್ನೆ **"ಆಧ್ಯಾತ್ಮಿಕ ಪ್ರಶ್ನೆಗಳು - ಉತ್ತರಗಳು"** ಎನ್ನುವ ನಮ್ಮ ಗ್ರಂಥದಲ್ಲಿ ನಿಮಗೆ ಲಭ್ಯವಾಗುತ್ತದೆ. ಆದಿನ ಆ ಪ್ರಶ್ನೆಗೆ ನಾವು ಉತ್ತರ ಹೇಳಿದಂತೆ ಎಲ್ಲರೂ "ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆ" ಎಂದು ಬರೆದಿದ್ದಾರೆ." ದೇವರು ಎಷ್ಟು ಆತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆ?" ಎಂದು ನಾನು ಕೇಳಿದ್ದರೆ ಆ ಉತ್ತರ ಸರಿಹೋಗುತ್ತದೆ. ಹಾಗೆಯೇ "ದೇವರು ಎಷ್ಟು ಭಾಗಗಳಾಗಿ ಇದ್ದಾನೆ?" ಎಂದು ಕೇಳಿದರೂ ಸ್ವಲ್ಪಮಟ್ಟಿಗೆ ಉತ್ತರ ಸರಿಹೋಗುತ್ತಿತ್ತು. ಆದರೇ ಇಲ್ಲಿ ಪ್ರಶ್ನೆಗಳಲ್ಲಿ ಒಂದು ಪ್ರತ್ಯೇಕತೆ ಇದೆ. ಆ ಪ್ರತ್ಯೇಕತೆಯನ್ನು ಯಾರೂ ಗಮನಿಸದೇ ಬರೆಯುವುದರಿಂದ ಆ ಉತ್ತರವನ್ನು ಸತ್ಯವಾಗಿ ಲೆಕ್ಕಿಸಲಿಲ್ಲ. ಆ ಉತ್ತರವನ್ನು ಅಸತ್ಯ ಉತ್ತರವಾಗಿ ಪರಿಗಣಿಸಿದ್ದೇವೆ. ಆ ಪ್ರಶ್ನೆಯಲ್ಲಿನ ಪ್ರತ್ಯೇಕತೆ ಏನೆಂದರೆ "ದೃಷ್ಠಿ ಆದಿಯಲ್ಲಿ ದೇವರು ಎಷ್ಟು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ?" ಎನ್ನುವುದು ಪ್ರಶ್ನೆ.

ಆ ಪ್ರಶ್ನೆ ಸೃಷ್ಠಿಗಿಂತ ಪೂರ್ವದಲ್ಲಿ ಎಂದಾಗಲಿ, ಸೃಷ್ಠಿ ಆರಂಭದಲ್ಲಿ ಎಂದಾಗಲಿ ಅರ್ಥಕೊಡುತ್ತಿದೆ. ಸೃಷ್ಠಿ ಪೂರ್ವದಲ್ಲಿ ಅಥವಾ ಸೃಷ್ಠಿ ಆದಿಯಲ್ಲಿ ಏನು ಇಲ್ಲದ ಸ್ಥಿತಿಯಾಗಿ ಪ್ರಪಂಚವೇ ಇಲ್ಲದ ಸ್ಥಿತಿಯಾಗಿ ಇದೆಯೆಂದು ಹೇಳಬಹುದು. ವಿಶ್ವವೇ ಇಲ್ಲದ ಆ ಸ್ಥಿತಿಯಲ್ಲಿ ದೇವರು ಹೊರತು ಯಾರೂ ಇಲ್ಲ. ಆಗಿರುವುದು ಒಬ್ಬನೇ ದೇವರು, ಎರಡನೆ ದೇವರು ಎನ್ನುವವರು ಯಾರೂ ಇಲ್ಲ. ದೇವರು ಆಗ ವಿಶ್ವವನ್ನು ಸೃಷ್ಠಿಸಬೇಕೆಂದುಕೊಂಡಿದ್ದಾನೆ. ಉದಾಹರಣೆಯಾಗಿ ಹೇಳಿಕೊಂಡರೆ ಒಂದೇ ನೀರನ್ನು, ಯಾವ ರುಚಿಯಿಲ್ಲದ ನೀರನ್ನು, ಸ್ವಲ್ಪ ಸಕ್ಕರೆ ಬೆರೆಸಿ ಕೆಲವು ನೀರನ್ನು ಸಿಹಿಯಾಗಿ ಮಾಡಬಹುದು. ಹಾಗೆ ಕೆಲವು ನೀರಿಗೆ ಸ್ವಲ್ಪ ಉಪ್ಪು ಬೆರೆಸಿ ಕೆಲವು ನೀರನ್ನು ಉಪ್ಪುನೀರಾಗಿ ಮಾರ್ಪಡಿಸಬಹುದು. ಒಂದೇ ನೀರನ್ನು ಮೂರು ವಿಧಗಳ ಉಪ್ಪಾಗಿ, ಸಿಹಿಯಾಗಿ, ಸಪ್ಪೆಯಾಗಿ ಇಟ್ಟರೂ ಆ ಮೂರು ನೀರನ್ನು ಶೇಕರಿಸುವುದಕ್ಕೆ

ಮೊದಲು ಒಂದು ಸೋರೆ ಅಗತ್ಯ. ನೀರನ್ನು ಉಪ್ಪಾಗಿ, ಸಿಹಿಯಾಗಿ ಮಾರ್ಪಡಿಸದ ಮೊದಲೇ ನೀರನ್ನು ಶೇಕರಿಸುವುದಕ್ಕೆ ಬೇಕಾದ ಪಾತ್ರೆಯನ್ನು ಅಥವಾ ಬಿಂದಿಗೆಯನ್ನು ತಯಾರಾಗಿ ಇಟ್ಟುಕೊಳ್ಳಬೇಕು. ಅದೇ ವಿಧವಾಗಿ ದೇವರು ಒಬ್ಬನು ಮಳೆಯ ನೀರಿನಂತೆ ಮೊದಲು ಇದ್ದನು. ಮಳೆಯ ನೀರು ಬಣ್ಣ, ರುಚಿ, ವಾಸನೆ ಏನು ಇರದೆ ಸ್ವಚ್ಛವಾದ ನೀರಾಗಿರುತ್ತದೆ. ಹಾಗೆಯೇ ದೇವರು ದೇವರಾಗಿಯೇ ಒಬ್ಬನು ಸ್ವಚ್ಛವಾದವನಾಗಿ ಇದ್ದನು. ಹಾಗೆ ಇದ್ದ ದೇವರು ತನ್ನ ಸಂಕಲ್ಪದಿಂದ ದೇವರು ಸ್ವತಃವಾಗಿ ಸೃಷ್ಠಿಯನ್ನು ತಯಾರು ಮಾಡುವ ಕಾರ್ಯವನ್ನು ಮಾಡಿದ್ದಾನೆ. ನೀವು ಚೆನ್ನಾಗಿ ಜ್ಞಾಪಕ ಇಟ್ಟುಕೊಳ್ಳಿ. ಸೃಷ್ಠಿ ಇಲ್ಲದಪೂರ್ವದಲ್ಲಿ ದೇವರು ಕಾರ್ಯವನ್ನು ಮಾಡಿದ್ದಾನೆ. ಸೃಷ್ಠಿ ನಂತರ ಆತನು ಯಾವ ಕಾರ್ಯವನ್ನು ಮಾಡಲಿಲ್ಲ. ಸೃಷ್ಠಿ ಪೂರ್ವದಲ್ಲಿ ರೂಪ, ನಾಮ, ಕ್ರಿಯೆಗಳಿರುವ ದೇವರು ಸೃಷ್ಠಿ ನಂತರ ಆ ಮೂರು ಇಲ್ಲದಂತೆ ರೂಪ, ನಾಮ, ಕ್ರಿಯಾ ರಹಿತನಾಗಿದ್ದಾನೆ.

ದೇವರು ಸೃಷ್ಠಿ ತಯಾರಾದ ನಂತರ ಪ್ರಜೆಗಳಿಗೆ ತನ್ನ ಇರುವಿಕೆಯನ್ನು ತಿಳಿಯದಂತೆ ಬಚ್ಚಿಡುವುದಕ್ಕೆ ತಾನು ಅದರಲ್ಲಿ ಮೂರು ಆತ್ಮಗಳಾಗಿ ವಿಭಜಿಸ್ಪಟ್ಟಿರುವುದಕ್ಕೆ ನೀರಿಗೆ ಪಾತ್ರೆ ಹೇಗೆ ಅಗತ್ಯವಾಗಿದೆಯೋ, ದೇವರಿಗೆ ಪ್ರಕೃತಿ ಹಾಗೆ ಅಗತ್ಯವಾಗಿದೆ. ಒಂದು ಬಿಂದಿಗೆಯನ್ನು ಆಧಾರ ಮಾಡಿಕೊಂಡು ಮೂರು ರುಚಿಗಳ ನೀರಿರುವಂತೆ, ಒಂದು ಪ್ರಕೃತಿಯಿಂದ ತಯಾರಾದ ಶರೀರವನ್ನು ಆಧಾರ ಮಾಡಿಕೊಂಡು ದೇವರು ಮೂರು ಆತ್ಮಗಳಾಗಿ ಪ್ರಕೃತಿಯಲ್ಲಿ ಮಿಳಿತವಾಗಿದ್ದಾನೆ. ಪ್ರಕೃತಿಯಲ್ಲಿ ಕಾಣಿಸದೇ ಇರುವ ದೇವರು ಯಾರಿಗೂ ಯಾವ ವಿಧವಾಗಿ ತಿಳಿಯುವುದಿಲ್ಲ. ಆದ್ದರಿಂದ ತನ್ನನ್ನು ತಿಳಿಯುವುದಕ್ಕೆ ಬೇಕಾದ ಜ್ಞಾನವನ್ನು ಕೂಡಾ ದೇವರು ಸೃಷ್ಠಿ ನಂತರ ತಿಳಿಸಿದ್ದಾನೆ. ಈಗ ಸೃಷ್ಠಿ ಪ್ರಾರಂಭದಲ್ಲಿ ನಡೆದ ವಿಷಯವನ್ನು ತಿಳಿದುಕೊಳ್ಳೋಣ. ಸೃಷ್ಠಿಗೆ ಪೂರ್ವದಲ್ಲಿ ದೇವರಿಗೆ ರೂಪ, ನಾಮ, ಕ್ರಿಯೆ ಮೂರು ಇದ್ದವು. ಆದರೇ ಅವು ಹೇಗಿದ್ದವೋ ಯಾವ ಮಾನವನಿಗು ತಿಳಿದಿಲ್ಲ. ಸೃಷ್ಠಿ ಪೂರ್ವವೊಂದರ

ವಿಷಯವಾದ್ದರಿಂದ ಯಾರಾಗಲಿ ತಿಳಿಯುವುದಕ್ಕೆ ಅವಕಾಶವಿಲ್ಲ. ಏನು ಇಲ್ಲದದಿನ ಒಬ್ಬನಾಗಿರುವ ದೇವರು ತಾನು ಮನುಷ್ಯರನ್ನು ಸೃಷ್ಠಿಸಬೇಕೆಂದು ಕೊಂಡಿದ್ದಾನೆ. ಒಬ್ಬನಾಗಿರುವ ದೇವರು, ರೂಪ, ನಾಮ, ಕ್ರಿಯೆಗಳಿರುವ ದೇವರು ಸೃಷ್ಠಿಸಲ್ಪಡುವ ಮನುಷ್ಯನಿಗೆ ತಿಳಿಯದಂತೆ ಇರುವುದಕ್ಕೆ ಪ್ರಕೃತಿಯೆನ್ನುವ ಹೊದಿಕೆಯನ್ನು ತೆಗೆದುಕೊಂಡು (ತಯಾರು ಮಾಡಿಕೊಂಡು) ಅದರಲ್ಲಿ ತನ್ನನ್ನು ಮೂರು ವಿಧಗಳಾಗಿ ವಿಭಜಿಸಿ ಅವಿತುಕೊಂಡಿದ್ದಾನೆ. ಹಾಗೆ ಮಾಡುವುದಕ್ಕೆ ಮೊಟ್ಟಮೊದಲು ಪ್ರಕೃತಿಯೆನ್ನುವ ಕಾಣಿಸುವುದನ್ನು ತಯಾರು ಮಾಡಿದ್ದಾನೆ. ಪ್ರಕೃತಿಯನ್ನು ಸೃಷ್ಠಿಸಿದ ದೇವರು ಅದನ್ನು ನಂತರ ಐದು ಭಾಗಗಳಾಗಿ ಮಾಡಿದ್ದಾನೆ.

ದೇವರು ಆದಿಯಲ್ಲಿ ಮೊಟ್ಟಮೊದಲು ಪ್ರಕೃತಿಯನ್ನು ತನ್ನಿಂದಲೇ ತಯಾರು ಮಾಡಿದ್ದಾನೆ. ಅಂದರೇ ತನ್ನಲ್ಲಿ ಸ್ವಲ್ಪ ಭಾಗವನ್ನು ಹೊರಗೆ ತೆಗೆದು ಅದಕ್ಕೆ **'ಪ್ರಕೃತಿ'** ಎಂದು ಹೆಸರು ಇಟ್ಟಿದ್ದಾನೆ. ಇದನ್ನನುಸರಿಸಿ ಪ್ರಕೃತಿ ದೇವರಲ್ಲಿನ ಒಂದು ಭಾಗವೇಯೆಂದು ಹೇಳಬಹುದು. ಆ ವಿಧವಾಗಿ ಮೊದಲು ತನ್ನಿಂದ ಪ್ರಕೃತಿಯನ್ನು ಹೊರಗೆ ತೆಗೆದ ದೇವರು ಪ್ರಕೃತಿಯನ್ನು ಐದು ಭಾಗಗಳಾಗಿ ವಿಭಜಿಸಿ ಅವುಗಳಿಗೆ ವರಸೆಯಾಗಿ **ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂದು** ಹೆಸರು ಇಟ್ಟಿದ್ದಾನೆ. ಆ ಐದು ಭಾಗಗಳನ್ನು ಒಂದೊಂದನ್ನು ಐದು ಭಾಗಗಳಾಗಿ ತಯಾರುಮಾಡಿ ಒಂದಕ್ಕೊಂದು ಕೂಡಿಸಿ ಮಾನವ ಶರೀರವನ್ನು ತಯಾರು ಮಾಡಿದ್ದಾನೆ. ಮಾನವ ಶರೀರ ತಯಾರಾದ ನಂತರ ತನ್ನಿಂದ ಸ್ವಲ್ಪ ಭಾಗಗಳನ್ನು ಹೊರಗೆ ತೆಗೆದು ಅದಕ್ಕೆ **'ಆತ್ಮ'** ಎಂದು ಹೆಸರಿಟ್ಟಿದ್ದಾನೆ. ತನ್ನನ್ನು ಆತ್ಮಗಿಂತ ಬೇರೆಯಾಗಿರುವಂತೆ, ತನ್ನನ್ನು **'ಪರಮಾತ್ಮ'** ಎಂದಿದ್ದಾನೆ. ನಂತರ ಆತ್ಮನಂತೆ ಸ್ವಲ್ಪ ಭಾಗವನ್ನು ಹೊರಗೆ ತೆಗೆದು **'ಜೀವಾತ್ಮ'** ಎಂದು ಹೆಸರಿಟ್ಟಿದ್ದಾನೆ. ಈ ವಿಧವಾಗಿ ತಾನು ದೇವರಾಗಿಯೇ ಇದ್ದು ತನ್ನಿಂದ ಪ್ರಕೃತಿಯನ್ನು, ಎರಡು ಆತ್ಮಗಳನ್ನು ವಿಭಜಿಸುವುದರಿಂದ ದೇವರು ಮೊದಲು ಸೃಷ್ಠಿ ಆದಿಯಲ್ಲಿ ನಾಲ್ಕು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು ಹೇಳಬಹುದು.

ಆದ್ದರಿಂದ ದೇವರು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು ಉತ್ತರ ಬರೆದರೂ ಅದನ್ನು ತಪ್ಪಾಗಿ ಲೆಕ್ಕಿಸಿದ್ದೇವೆ. ಅದಕ್ಕೆ ಸರಿಯಾದ ಉತ್ತರ ನಾಲ್ಕು ಭಾಗಗಳೆಂದು ಹೇಳಬೇಕು.

ದೇವರು ಸೃಷ್ಠಿಗೆ ಪೂರ್ವದಲ್ಲಿ ಒಂದು ವಿಧವಾಗಿ, ಸೃಷ್ಠಿ ನಂತರ ಮತ್ತೊಂದು ವಿಧವಾಗಿ ಇದ್ದಾನೆ. ದೈವ ಗ್ರಂಥಗಳಲ್ಲಿ ಸೃಷ್ಠಿಗೆ ಪೂರ್ವದಲ್ಲಿರುವ ರೂಪ, ನಾಮ, ಕ್ರಿಯೆಗಳಿರುವ ದೇವರನ್ನು ಕುರಿತು ಕೇವಲ ಶೇ.ಹತ್ತರಷ್ಟು ಮಾತ್ರವೇ ಹೇಳಿದ್ದಾರೆ. ಉಳಿದ ಶೇ.90 ರಷ್ಟು ಸೃಷ್ಠಿ ನಂತರ ನಾಮ, ರೂಪ, ಕ್ರಿಯೆಗಳು ಇಲ್ಲದ ದೇವರನ್ನು ಕುರಿತು ಹೇಳಿದ್ದಾರೆ. ಆದ್ದರಿಂದ ನೀವು ಇಲ್ಲಿಯವರೆಗು ಗ್ರಂಥಗಳ ಮೂಲಕ ಜ್ಞಾನದಿಂದ ತಿಳಿದಿದೆ. ಸೃಷ್ಠಿ ನಂತರ ದೇವರನ್ನೇ ಆದ್ದರಿಂದ ನೀವು ಹೇಳುವ ದೇವರು, ನಾನು ಹೇಳುವ ದೇವರು ಇಬ್ಬರೂ ಒಬ್ಬರೇ. ಆದ್ದರಿಂದ ನೀವು ವಿಶ್ವಾಸಿಸಿದ ದೇವರನ್ನೇ ನಾನು ಹೇಳುತ್ತಿದ್ದೇನೆಂದು ಮೊದಲೇ ಹೇಳಿದ್ದೇನೆ. ಸೃಷ್ಠಿಗೆ ಪೂರ್ವದಲ್ಲಿರುವ ದೇವರನ್ನು ಕುರಿತು ತಿಳಿಯಬೇಕಾದ ಅಗತ್ಯವಿಲ್ಲ. ದೇವರ ಧರ್ಮಗಳ ಪ್ರಕಾರ, ದೈವ ಗ್ರಂಥಗಳ ಪ್ರಕಾರ ಮನುಷ್ಯ ವಿಶ್ವಾಸಿಸಬೇಕಾಗಿರುವುದು ಸೃಷ್ಠಿ ನಂತರದ ದೇವರನ್ನೇ. ದೈವಗ್ರಂಥಗಳಲ್ಲಿ ಸೃಷ್ಠಿಗೆ ಪೂರ್ವದಲ್ಲಿ, ಸೃಷ್ಠಿ ನಂತರ ಇರುವ ದೇವರನ್ನು ಬೇರೆಬೇರೆಯಾಗಿ ಹೇಳಿದ್ದಾರೆ. ಆದರೂ ಇಲ್ಲಿಯವರೆಗು ಅವರ ವ್ಯತ್ಯಾಸವನ್ನಾಗಲಿ, ದೈವ ಗ್ರಂಥಗಳಲ್ಲಿ ಹೇಳಿದ ವಿಧಾನವನ್ನಾಗಲಿ ಯಾರೂ ತಿಳಿಯದೇ ಹೋಗಿದ್ದಾರೆ. ಆದ್ದರಿಂದ ಈಗ ನಾವು ಹೇಳುವ ಸತ್ಯ ಅಸತ್ಯವಾಗಿ ಕಾಣಿಸುತ್ತಿದೆ. ನಾನು ಹೇಳುವುದು ಸತ್ಯ ಎಂದು ತಿಳಿಯುವುದಕ್ಕೆ ದೈವಗ್ರಂಥಗಳಲ್ಲಿ ದೇವರು ಹೇಳಿದ ವಾಕ್ಯಗಳನ್ನು ಸಂದರ್ಭಾನುಸಾರ ನೋಡೋಣ.

ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿ 112ನೇ ಸುರಾ **"ಅಲ್ ಇಖ್ಲಾಸ್"** ನಲ್ಲಿರುವ ನಾಲ್ಕು ವಾಕ್ಯಗಳನ್ನು ನೋಡಿದರೆ ಅಲ್ಲಿ ಹೇಳಿರುವುದು ಸೃಷ್ಠಿಗೆ ಪೂರ್ವದಲ್ಲಿರುವ ದೇವರನ್ನು ಕುರಿತೆಂದು ಸುಲಭವಾಗಿ ತಿಳಿದು ಹೋಗುತ್ತಿದೆ.

(112–1,2,3,4)

1) **ಓ ಪ್ರವಕ್ತ ಹೀಗೆ ಹೇಳು "ಆತನೇ ಅಲ್ಲಾಹ್ (ದೇವರು) ಏಕೈಕನೂ."**

2) **ಅಲ್ಲಾಹ್ ಯಾರ ಅಕ್ಕರೆ ಇಲ್ಲದವನು.**

3) **ಆತನಿಗೆ ಸಂತಾನ ಇಲ್ಲ ಮತ್ತು ಆತನು ಯಾರಿಗೂ ಸಂತಾನ ಅಲ್ಲ.**

4) **ಸರ್ವಲೋಕಗಳಲ್ಲಿ ಆತನೊಂದಿಗೆ ಹೋಲಿಸುವಂತಥದ್ದು ಯಾವುದೂ ಇಲ್ಲ.**

ಈ ನಾಲ್ಕು ವಾಕ್ಯಗಳು "ದಿವ್ಯ ಖುರ್‌ಆನ್ ಸಂದೇಶ" ಕನ್ನಡ ಅನುವಾದದಲ್ಲಿನವು. ಇತರೆ ಕನ್ನಡ ಅನುವಾದಗಳಲ್ಲಿಯೂ ಕೂಡಾ ಇವೇ ನಾಲ್ಕು ವಾಕ್ಯಗಳೇ ಭಾಷೆಯಲ್ಲಿ ಸ್ವಲ್ಪ ವ್ಯತ್ಯಾಸದಿಂದ ಬರೆದಿದ್ದರೂ, ಎಲ್ಲವುಗಳಲ್ಲಿ ಭಾವನೆ ಮಾತ್ರ ಒಂದೇ ಇರುತ್ತದೆಯೆಂದು ತಿಳಿಯಬೇಕು.

ಮೊದಲ ವಾಕ್ಯವನ್ನು ನೋಡಿದರೆ **"ಆತನು ಏಕೈಕ ದೇವರು"** ಎಂದು ಬರೆದಿದ್ದಾರೆ. ಈ ಮಾತನ್ನು ಮಹಾಜ್ಞಾನಿಯಾದ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಹೇಳಿದ್ದಾನೆ. ಆದ್ದರಿಂದ ಪ್ರವಕ್ತ ಹೀಗೆ ಹೇಳು **"ದೇವರು ಒಬ್ಬನೇ, ಆತನಿಗಿಂತ ಇತರೆ ದೇವರು ಇಲ್ಲ."** ಎಂದು ಹೇಳಿದ್ದಾರೆ. ಸೃಷ್ಠಿ ಆದಿಯಲ್ಲಿ ಸೃಷ್ಠಿಗಿಂತ ಮೊದಲು ಇರುವ ದೇವರನ್ನು ಕುರಿತು ಹೇಳಿದ ಜ್ಞಾನವಾಕ್ಯವು ಆಗಿರುವುದರಿಂದ ಈ ಮಾತು ಪೂರ್ತಿ ಸತ್ಯವೆಂದು ಹೇಳಬಹುದು. ಏಕೆಂದರೆ! ಸೃಷ್ಠಿಗಿಂತ ಮೊದಲು ದೇವರು ಒಬ್ಬನೇ ಇದ್ದಾನೆ. ದೇವರು ಹೊರತು ಇತರೆ ಯಾರೂ ಇಲ್ಲ. ಸೃಷ್ಠಿ ಪೂರ್ವದಲ್ಲಿ ಮನುಷ್ಯರಾಗಲಿ ದೇವತೆಗಳಾಗಲಿ ಇಲ್ಲ. ಒಟ್ಟಾರೆ ವಿಶ್ವವೇ ಇಲ್ಲ. ಹಾಗಿರುವಾಗ ದೇವರು ಒಬ್ಬನು ಏಕೈಕವಾಗಿ ಇದ್ದಾನೆಂದು ಆತನು ಹೊರತು ಇತರೆ ದೇವರೆನ್ನುವವನಾಗಲಿ, ಇತರೆ ಮನುಷ್ಯ ಎನ್ನುವವನಾಗಲಿ ಯಾರೂ ಇಲ್ಲ. ಆದ್ದರಿಂದ ಈಗ ದೇವರೊಬ್ಬನೇ ಇದ್ದಾನೆಂದು, ಆತನು ಹೊರತುಪಡಿಸಿ ಇತರರು ಯಾರೂ ಇಲ್ಲವೆಂದು ಹೇಳಿದ್ದಾರೆ. ಸೃಷ್ಠಿ ನಂತರ ದೇವರೇ ಪ್ರಕೃತಿ ಮೂಲಕ ಜೀವರಾಶಿಗಳ ಶರೀರಗಳನ್ನು ಸೃಷ್ಠಿಸಿ, ಆ

ಶರೀರಗಳಲ್ಲಿ ಒಬ್ಬನಾಗಿರುವ ದೇವರು ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟು ಒಂದು ಜೀವಾತ್ಮವಾಗಿರುವಾಗ, ಎರಡನೆಯದು ಆತ್ಮವಾಗಿ ಇರುವಾಗ, ಮೂರನೆಯದು ಪರಮಾತ್ಮನಾಗಿಯೇ (ದೇವರಾಗಿಯೇ) ಇದ್ದಾನೆ. ಸೃಷ್ಠಿ ಮೊದಲಿರುವ ಒಬ್ಬನೇ, ಸೃಷ್ಠಿ ನಂತರ ನಾಲ್ಕು ಭಾಗಗಳಾಗಿ ಇದ್ದಾನೆಂದು ಹೇಳಬಹುದು. ಸೃಷ್ಠಿ ಪೂರ್ವದಲ್ಲಿ ದೇವರು ಒಬ್ಬನೇ ಇರುವಾಗ ಸೃಷ್ಠಿ ನಂತರ ಒಬ್ಬನಾಗಿಲ್ಲ. ಪ್ರಕೃತಿ, ಜೀವಾತ್ಮ, ಆತ್ಮ, ಪರಮಾತ್ಮನಾಗಿ ಇದ್ದಾನೆ. ಜೀವಾತ್ಮ, ಆತ್ಮ ಹೇಗೆ ಪರಮಾತ್ಮನಲ್ಲಿ ಭಾಗವೊ ಹಾಗೆಯೇ ಪ್ರಕೃತಿ ಕೂಡಾ ಪರಮಾತ್ಮನಲ್ಲಿ ಒಂದು ಭಾಗವಾಗಿದೆ. ಪ್ರಕೃತಿ ಮೊದಲು ಐದು ಭಾಗಗಳಾಗಿ ತಯಾರಾಗಿದೆ. ನಂತರ ಒಂದೊಂದು ಐದು ಭಾಗಗಳಾಗಿ ತಯಾರಾಗಿ, ಒಟ್ಟಾರೆ ಶರೀರಭಾಗಗಳು ತಯಾರಾಗಿ ಜೀವಿಯು ನಿವಾಸಿಸುವುದಕ್ಕೆ ಯೋಗ್ಯವಾಗಿ ತಯಾರಾಗಿದೆ. ಪ್ರಕೃತಿಯಿಂದ ತಯಾರಾದ ಶರೀರದಲ್ಲಿ ಜೀವಾತ್ಮ ಸೇರಿ ಅದರಲ್ಲಿ ನಿವಾಸವಿರುವಾಗ, ಜೀವಿಗೆ ಸುಖದುಃಖಗಳನ್ನು ಒದಗಿಸುವುದಕ್ಕೆ ಆತ್ಮ ಶರೀರವನ್ನು ಕದಲಿಸುತ್ತಾ ಕೆಲಸವನ್ನು ಮಾಡಿಸುತ್ತಿದೆ, ಆತ್ಮ ಶರೀರದ ಮೂಲಕ ಅವಯವಗಳನ್ನು ಕದಲಿಸುತ್ತಾ ಕೆಲಸವನ್ನು ಮಾಡಿದಾಗ, ಆ ಕೆಲಸದಲ್ಲಿರುವ ಸುಖದುಃಖಗಳನ್ನು ಜೀವಾತ್ಮ ಅನುಭವಿಸುತ್ತಿದೆ. ಆತ್ಮ ನಿರಂತರ ಶರೀರದಲ್ಲಿ ಕೆಲಸಮಾಡಿದಾಗ, ಜೀವಿಯು ಸುಖದುಃಖ ಅನುಭವಗಳನ್ನು ಅನುಭವಿಸುತ್ತಾ ಆ ಕೆಲಸವನ್ನು ತಾನೇ ಮಾಡಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಶರೀರದಲ್ಲಿ ಆತ್ಮ ಕೆಲಸ ಮಾಡುವುದನ್ನು, ಜೀವಾತ್ಮ ತಾನೇ ಮಾಡಿದಂತೆ ಅಂದುಕೊಳ್ಳುವುದನ್ನು, ಪರಮಾತ್ಮ ಶರೀರದಲ್ಲಿಯೇ ಇದ್ದು ಸಾಕ್ಷಿಯಾಗಿ ನೋಡುತ್ತಾಇದ್ದಾನೆ.

ಸೃಷ್ಠಿ ನಂತರ ದೇವರಿದ್ದರೂ ದೇವರು ಒಬ್ಬನಾಗಿಲ್ಲ. ದೇವರಲ್ಲಿ ಭಾಗವಾದ ಆತ್ಮ ದೇವರಾಗಿ ಚಲಾವಣೆ ಆಗುತ್ತಿದೆ. ದೇವರು ಸೃಷ್ಠಿ ನಂತರ ಸ್ಥಬ್ಧತೆಯಾಗಿ ಇದ್ದನು. ತಾನು ಮಾಡಬೇಕಾದ ಕೆಲಸಗಳೆಲ್ಲ ತನ್ನ ಆತ್ಮಗೆ ಹೇಳಿ ತನ್ನಂತಹವನಾಗಿ ಇರುವಂತೆ ಮಾಡಿದ್ದಾನೆ. ಸೃಷ್ಠಿ ನಂತರ ನಡೆಯಬೇಕಾದ

ಕಾರ್ಯಗಳೆಲ್ಲವನ್ನು ದೇವರಾಗಿ ಚಲಾವಣೆಯಾಗುತ್ತಿರುವ ಆತ್ಮವೇ ಮಾಡುತ್ತಿದೆ. ದೇವರು ಮಾತ್ರ ಸೃಷ್ಠಿ ನಂತರ ಎಲ್ಲಾ ನೋಡುತ್ತಾ ಸಾಕ್ಷಿಯಾಗಿದ್ದು, ದೇವರಿಂದ ಅಧಿಕಾರಹೊಂದಿ ದೇವರಾಗಿರುವ ಆತ್ಮ ಎಲ್ಲವುದಕ್ಕು ಅಧಿಪತಿಯಾಗಿದ್ದೂ, ಒಂದುಕಡೆ ಪ್ರಕೃತಿಗೆ ಸೂಚನೆಗಳು ಕೊಡುತ್ತಾ, ಒಂದುಕಡೆ ಭೂತಗಳು ಗ್ರಹಗಳಾದ ಪಾಲನೆ ರಂಗದೊಳಗಿನವರಿಗೆ ಎಲ್ಲಿ ಏನು ಮಾಡಬೇಕೊ, ಯಾವಾಗ ಸುನಾಮಿಗಳು ಸೃಷ್ಠಿಸಬೇಕೋ, ಎಲ್ಲಿ ತುಫಾನುಗಳು ಪ್ರವಾಹಗಳು ತರಬೇಕೋ, ಎಲ್ಲಿ ಪ್ರಮಾದಗಳು ಉಂಟುಮಾಡಬೇಕೊ, ಎಲ್ಲಿ ರೋಗಗಳು ವಿಸ್ತರಿಸಬೇಕೊ ಹೇಳುತ್ತಾ, ಎಲ್ಲರಿಗೂ ಅಧಿಕಾರಿಯಾಗಿರುತ್ತಾ ಮಾನವನ ಶರೀರದಲ್ಲಿ ಕಾರ್ಯಕರ್ತನಾಗಿ ಕೆಲಸ ಮಾಡುತ್ತಿದ್ದಾನೆ. ಶರೀರದಲ್ಲಿ ಆತ್ಮ ಕೆಲಸವನ್ನು ಮಾಡುತ್ತಾ ಕಾರ್ಯಕರ್ತನಾಗಿ ಇರದೆ ಹೋದರೆ ಮನುಷ್ಯನ ಶರೀರದಲ್ಲಿ ಯಾವ ಚಿಕ್ಕ ಕಾರ್ಯವು ನಡೆಯುವುದಿಲ್ಲ. ಶರೀರದ ಮೂಲಕ ನಡೆಯುವ ಹೊರಗಿನ ಕಾರ್ಯಗಳಾದ, ಶರೀರದೊಳಗೆ ನಡೆಯುವ ಕಾರ್ಯಗಳಾದರೂ ಗುಂಡಿಗೆ ಹೊಡೆದುಕೊಳ್ಳುವುದು, ಶ್ವಾಸ ಆಡುವುದು, ಮೂತ್ರಪಿಂಡಗಳು ಮೂತ್ರವನ್ನು ಶೋಧಿಸುವುದು ಮೊದಲಾದ ಅನಿಚ್ಛಾದೀನ ಕಾರ್ಯಗಳೆಲ್ಲವೂ ನಿಂತುಹೋಗುತ್ತವೆ. ಆತ್ಮ ಕಾರ್ಯಕರ್ತನಾಗಿ ಕೆಲಸ ಮಾಡದಂತೆ ಒಂದು ನಿಮಿಷವಿದ್ದರೂ ಮಾನವ ಶರೀರ ಬದುಕುವ ಅವಕಾಶವೇ ಇಲ್ಲ. ಆದುದರಿಂದ ಮನುಷ್ಯನ ಶರೀರದಲ್ಲಿ ಮನುಷ್ಯನಿಗೆ ತಿಳಿಯದಂತೆ ಶರೀರಾಂತರ್ಗತವಾಗಿ ಆತ್ಮ ಎಲ್ಲವೇಳೆಯಲ್ಲಿ ಕೆಲಸ ಮಾಡುವುದರಿಂದ ಮನುಷ್ಯ ಜೀವಿಸುತ್ತಿದ್ದಾನೆ. ಇಲ್ಲದಿದ್ದರೆ ಮನುಷ್ಯ ಜೀವಿಸುವ ಅವಕಾಶವೇ ಇಲ್ಲ. ಸೃಷ್ಠಿಗೆ ಪೂರ್ವದಲ್ಲಿರುವ ದೇವರು ಈ ಕೆಲಸಗಳೆಲ್ಲ ಆತ್ಮಗೆ ಒಪ್ಪಿಸಿ. ಆತ್ಮವನ್ನೇ ದೇವರಾಗಿ ಇರುವಂತೆ ನೇಮಿಸಿದ್ದಾನೆ, ತಾನು ಸಾಕ್ಷಿಯಾಗಿ ಎಲ್ಲಾ ನೋಡುತ್ತಾ ಶರೀರದೊಳಗೂ, ಶರೀರದ ಹೊರಗೆ ಇದ್ದಾನೆ. ಆದರೇ ಆತ್ಮ ದೇವರಾಗಿರುತ್ತಾ ಶರೀರದೊಳಗೇ ಇದೆಯೇ ಹೊರತು, ಶರೀರದ ಹೊರಗಿಲ್ಲ. ಶರೀರದ ಹೊರಗೆ, ಶರೀರದೊಳಗಿರುವ ದೇವರು ಸೃಷ್ಠಿ ಪೂರ್ವದಿಂದ ಇರುವ ದೇವರು, ಶರೀರದೊಳಗೆ ಮಾತ್ರವಿದ್ದು ಶರೀರಕ್ಕು, ಜೀವಿಗು ಅಧಿಪತಿಯಾಗಿರುವ ಆತ್ಮ

ಶರೀರದೊಳಗೇ ದೇವರಾಗಿದ್ದಾನೆ ಎಂದು ತಿಳಿಯಬೇಕು. ಈ ದಿನ ಶರೀರದೊಳಗೆ ಇರುವ ದೇವರನ್ನು ಕುರಿತು ದೈವಗ್ರಂಥಗಳಲ್ಲಿ ಹೆಚ್ಚಾಗಿ ಬರೆಯಲ್ಪಟ್ಟಿದೆ. ಸೃಷ್ಠಿ ಪೂರ್ವದಲ್ಲಿರುವ ದೇವರು ಸ್ಥಬ್ದತೆಯಾಗಿ ಯಾರಿಗೂ ತಿಳಿಯದೇ, ಏನು ಮಾಡದಂತೆ ಸಾಕ್ಷಿಯಾಗಿ ಮಾತ್ರ ಇರುವುದರಿಂದ ಆತನಿಗೆ ಹೆಚ್ಚಿನ ಪ್ರಧಾನ್ಯತೆ ಇಲ್ಲ. ಆದುದರಿಂದ ತಾತನಾದ ದೇವರನ್ನು ಕುರಿತು ದೈವ ಗ್ರಂಥಗಳಲ್ಲಿ ಕಡಿಮೆ ಹೇಳಲಾಗಿದೆ. ಶರೀರದಲ್ಲಿ ದೇವರಾಗಿ ಇರುತ್ತಾ ಒಂದುಕಡೆ ಅಧಿಕಾರಿಯಾಗಿ, ಒಂದುಕಡೆ ಕಾರ್ಯಕರ್ತನಾಗಿರುವ ದೇವರನ್ನು ಕುರಿತು ಗ್ರಂಥದಲ್ಲಿ ಕೂಡಾ ಹೆಚ್ಚಾಗಿ ಹೇಳುವುದಾಗಿದೆ ಈ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಸೂರಾ ಆರು ಆಯತ್ 102ರಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**(6-102) "ಆತನೇ ಅಲ್ಲಾಹ್ ನಿಮ್ಮ ಪ್ರಭು. ಆತನು ಹೊರತು ಮತ್ತೊಬ್ಬ ಆರಾಧ್ಯನು ಇಲ್ಲ. ಆತನೇ ಸರ್ವರಿಗು ಸೃಷ್ಠಿಕರ್ತ. ಆದ್ದರಿಂದ ನೀವು ಆತನನ್ನೇ ಆರಾಧಿಸಿರಿ ಮತ್ತು ಆತನೇ ಪ್ರತಿಯೊಂದರ ಕಾರ್ಯಕರ್ತ"**

ಈ ವಾಕ್ಯವನ್ನು ಇಲ್ಲಿ ಎರಡನೆಸಲ ಹೇಳಿದ್ದೇವೆ. ದೇವರಾಗಿ ಆತ್ಮ ಇರುತ್ತಾ ಎಲ್ಲರನ್ನು ಸೃಷ್ಠಿಸಿದವನು ಆತ್ಮನಾದ ದೇವರೇ. ಎಲ್ಲರೂ ಆತನನ್ನೇ ಆರಾಧಿಸಬೇಕೆಂದು ಪರಮಾತ್ಮನಾದ ದೇವರು ಇಲ್ಲಿ ಹೇಳುವುದೇ ಅಲ್ಲದೆ ದ್ವಿತೀಯ ದೈವಗ್ರಂಥವಾದ ಇಂಜೀಲ್‌ನಲ್ಲಿ ಯೋಹಾನ್ ಸುವಾರ್ತೆ 5ನೇ ಅಧ್ಯಾಯ 21ರಿಂದ 24ನೇ ವಾಕ್ಯದವರೆಗು ಹೇಳಿದ್ದಾನೆ.

ನಮಗೆ ತಂದೆಯಾದ ಆತ್ಮವನ್ನೇ ದೇವರಾಗಿ ಆರಾಧಿಸಬೇಕೆಂದು ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ದೈವಗ್ರಂಥದಲ್ಲಿ ಪರಮಾತ್ಮನಾದ ದೇವರನ್ನು ಕುರಿತು ಖುರ್‌ಆನ್ ಗ್ರಂಥದಲ್ಲಿ 112ನೇ ಸೂರಾದಲ್ಲಿ ನಾಲ್ಕು ವಾಕ್ಯಗಳು ಇವೆ ನಾಲ್ಕು ವಾಕ್ಯಗಳು ತಾತನಾದ ದೇವರನ್ನು ಕುರಿತು ಹೇಳಿದ್ದಾರೆ. ಇನ್ನೂ ಅದೇ ದೈವಗ್ರಂಥದಲ್ಲಿಯೇ ತಂದೆಯಾದ ದೇವರ ವಾಕ್ಯಗಳು ಹೇಗೆ ಇವೆಯೋ ನೋಡಿರಿ.

(3-18) "ಅಲ್ಲಾಹ್ ಹೊರತು ಮತ್ತೊಂದು ಆರಾಧ್ಯ ದೈವ ಇಲ್ಲವೆಂದು ಸ್ವತಃವಾಗಿ ದೇವರು, ದೇವರ ದೂತರು ಮತ್ತು ಜ್ಞಾನ ಸಂಪನ್ನರಾದವರು ಸಾಕ್ಷ್ಯವನ್ನು ಕೊಡುತ್ತಿದ್ದಾರೆ. ಆತನ ಸಾಮರ್ಥ್ಯ, ಸಮತೂಕದಿಂದ ಈ ವಿಶ್ವವನ್ನು ನಿಲ್ಲಿಸಿದ್ದಾನೆ. ಸರ್ವಾಧಿಕಾರಿ ವಿವೇಚನಾಶಾಲಿಯಾದ ದೇವರು ಹೊರತು ಮತ್ತ್ಯಾರು ಆರಾಧನೆಗೆ ಅರ್ಹರು ಅಲ್ಲ."

(22-66) "ನಿಮಗೆ ಜೀವವನ್ನು ಕೊಟ್ಟವನು ಆತನೇ. ಆತನೇ ಮರಣವನ್ನು ಕೊಡುತ್ತಾನೆ. ಮತ್ತೆ ಆತನೇ ನಿಮ್ಮನ್ನು ಪುನಃ ಬದುಕಿಸುತ್ತಾನೆ. ಆದರೂ ಮಾನವನು ದೇವರ ಒಳಿತನ್ನು ಮರೆಯುವವನೇ."

(29-44) "ಅಲ್ಲಾಹ್ ಆಕಾಶಗಳನ್ನು, ಭೂಮಿಯನ್ನು ಸತ್ಯಬದ್ಧವಾಗಿ ಸೃಷ್ಟಿಸಿದ್ದಾನೆ. ಆಕಾಶಗಳನ್ನು, ಭೂಮಿಯನ್ನು ಪರಮಾರ್ಥದಿಂದ ಸೃಷ್ಟಿಸಿದ್ದಾನೆಂದು ತಿಳಿದರೆ ಇದರಲ್ಲಿ ದೊಡ್ಡ ನಿದರ್ಶನ ದೊರೆಯುತ್ತದೆ."

(2-255) "ದೇವರು ಮಾತ್ರವೇ ನಿಜವಾದ ಆರಾಧ್ಯದೈವ, ಆತನು ಹೊರತು ಇನ್ನೊಬ್ಬ ಆರಾಧ್ಯನು ಇಲ್ಲವೇ ಇಲ್ಲ". ಆತನು ಸಜೀವನು, ಆತನು ಎಲ್ಲದಕ್ಕು ಮೂಲಾಧಾರ. ಆತನಿಗೆ ತೂಗಡಿಕೆಯಾಗಲಿ, ನಿದ್ದೆಯಾಗಲಿ ಬರುವುದಿಲ್ಲ. ಭೂಮಿ, ಆಕಾಶಗಳಲ್ಲಿರುವ ಸಮಸ್ತವು ಆತನ ಅಧೀನದಲ್ಲಿ ಇದೆ. ಆತನ ಅನುಮತಿ ಇಲ್ಲದೇ ಆತನ ಸಮಕ್ಷಮದಲ್ಲಿ ಸಿಫಾರಸು ಮಾಡುವವನು ಯಾರೂ ಇಲ್ಲ. ಅವರಿಗೆ ಮುಂದೆ ಹಿಂದೆ ಇರುವ ಸಮಸ್ತ ಸಮಾಚಾರ ಒಟ್ಟಾರೆ ಆತನಿಗೆ ತಿಳಿದಿದೆ. ಆತನು ಕೋರಿರುವುದು ಹೊರತು ಆತನಿಗಿರುವ ಜ್ಞಾನದಲ್ಲಿನ ಯಾವ ವಿಷಯವು ಅವರ ಗ್ರಾಹಿತ ಪರಿಧಿಯೊಳಗೆ ಬರುವುದಿಲ್ಲ. ಆತನ ಕುರ್ಚಿ ವೈಶಾಲ್ಯ ಭೂಮಿ, ಆಕಾಶಗಳನ್ನು ಸುತ್ತುವರೆದಿದೆ. ಭೂಮ್ಯಾಕಾಶಗಳನ್ನು ರಕ್ಷಿಸುವುದಕ್ಕೆ ಆತನು ಎಂದಿಗೂ ದಣಿಯುವುದಿಲ್ಲ".

ಈಗ ನಾಲ್ಕು ವಾಕ್ಯಗಳನ್ನು ನಮೂನೆಗೆ ಇಲ್ಲಿ ಬರೆದು ತೋರಿಸುವುದು ನಡೆದಿದೆ. ಇದಕ್ಕು ಮೊದಲು 112ನೇ ಸೂರಾದಲ್ಲಿನ ನಾಲ್ಕು ವಾಕ್ಯಗಳನ್ನು

ಬರೆದು ತೋರಿಸಿದ್ದೇವೆ. ಆ ನಾಲ್ಕು ವಾಕ್ಯಗಳು ತಂದೆಗೆ ತಂದೆಯಾದ ಅಂದರೇ ತಾತನಾಗಿರುವ ದೇವರಿಗೆ ಸಂಬಂಧಿಸಿದ ವಾಕ್ಯಗಳೆಂದು ಹೇಳಿದ್ದೇನೆ. ಅದರಲ್ಲಿ ಮೊದಲ ವಾಕ್ಯಕ್ಕೆ ವಿವರವನ್ನು ಕೂಡಾ ಕೊಟ್ಟಿದ್ದೇವೆ. ಇನ್ನೂ ಮೂರು ವಾಕ್ಯಗಳಿಗೆ ವಿವರವನ್ನು ಹೇಳಬೇಕಾಗಿದೆ. ಅಷ್ಟರಲ್ಲಿಯೇ ನಿಮಗೆ ಅರ್ಥವಾಗುವುದಕ್ಕೆ ತಂದೆಯಾದ ದೇವರನ್ನು ಕುರಿತಾದ ನಾಲ್ಕು ವಾಕ್ಯಗಳನ್ನು ಹೇಳಿದ್ದೇವೆ. ಈ ನಾಲ್ಕು ವಾಕ್ಯಗಳು 2,3,22,29 ಸೂರಾಗಳಲ್ಲಿನ ವಾಕ್ಯಗಳನ್ನು ಹೇಳಿದ್ದೇವೆ. ಮೊದಲು ಹೇಳಿದ 112ನೇ ಸೂರಾದಲ್ಲಿ ನಾಲ್ಕು ವಾಕ್ಯಗಳು ಮಾತ್ರವೇ ಇವೆ. ಆ ನಾಲ್ಕು ವಾಕ್ಯಗಳು ತಾತನಾದ ದೇವರವು. ತಾತನಾದ ಸೃಷ್ಠಿ ಪೂರ್ವದ ದೇವರನ್ನು ಕುರಿತು ಗ್ರಂಥದಲ್ಲಿ ಹೆಚ್ಚಾಗಿ ಹೇಳಲಿಲ್ಲ. ಆದ್ದರಿಂದ 112ನೇ ಸೂರಾದಲ್ಲಿ ನಾಲ್ಕು ವಾಕ್ಯಗಳು ಮಾತ್ರವೇ ಇವೆ. ಆ ನಾಲ್ಕು ವಾಕ್ಯಗಳನ್ನು ನಾವು ಹೇಳುವುದಾಗಿದೆ. ಉಳಿದ ಗ್ರಂಥವೆಲ್ಲ ಎಲ್ಲಾ ಸೂರಾಗಳಲ್ಲಿ ಎಷ್ಟೋ ವಾಕ್ಯಗಳು ತಂದೆಯಾದ ದೇವರನ್ನು ಕುರಿತು ಹೇಳಿರುವವು ಇವೆ. ಎರಡನೆ ಸೂರಾದಲ್ಲಿ 286 ಆಯತ್‌ಗಳು, ಮೂರನೆ ಸೂರದಲ್ಲಿ 200 ಆಯತ್‌ಗಳು 22ನೇ ಸೂರಾದಲ್ಲಿ 78 ಆಯತ್‌ಗಳು, 29ನೇ ಸೂರಾದಲ್ಲಿ 69 ಆಯತ್‌ಗಳು ಇವೆ. ಈ ವಾಕ್ಯಗಳೆಲ್ಲವೂ ಹೆಚ್ಚುಕಡಿಮೆ ತಂದೆಯಾದ ದೇವರನ್ನು ಕುರಿತು ಹೇಳಿದ ವಾಕ್ಯಗಳು. ಖುರ್‌ಆನ್ ಗ್ರಂಥ ಒಟ್ಟಾರೆ 6236 ವಾಕ್ಯಗಳಿರುವಾಗ, ಅದರಲ್ಲಿ ಕೇವಲ 36 ವಾಕ್ಯಗಳು ಕೂಡಾ ತಾತನಾದ ದೇವರನ್ನು ಕುರಿತು ಹೇಳಿರುವವು ಇಲ್ಲ.

ನೀವು ಚೆನ್ನಾಗಿ ಗಮನಿಸಿದರೆ 112ನೇ ಸೂರಾದಲ್ಲಿ ಹೇಳಿದ ನಾಲ್ಕು ಆಯತ್‌ಗಳಲ್ಲಿನ ಸಮಾಚಾರಕ್ಕೆ ನಂತರ ಹೇಳಿದ (2–255), (3–18), (22–66), (29–44) ವಾಕ್ಯಗಳಿಗೆ ಎಷ್ಟೋ ವ್ಯತ್ಯಾಸ ಕಾಣಿಸುತ್ತದೆ. ಇದಕ್ಕು ಮುಂಚೆ ಮೊದಲ ವಾಕ್ಯದಲ್ಲಿನ ವ್ಯತ್ಯಾಸವನ್ನು ಕುರಿತು ಹೇಳಿಕೊಂಡಿದ್ದೇವೆ. ಈಗ ತಾತನಾದ ದೇವರು ಬೇರೆ, ತಂದೆಯಾದ ದೇವರು ಬೇರೆಯೆಂದು ಇನ್ನೂ ಸ್ವಲ್ಪ ವಿವರವನ್ನು ತಿಳಿದುಕೊಳ್ಳೋಣ. ತಂದೆಯಾದ ದೇವರೇ ಸಮಸ್ತ

ಮಾನವರಿಗು ಆಗತ್ಯವಾದ ಆರಾಧ್ಯನು. ಆದುದರಿಂದ ತಂದೆಯಾದ ದೇವರನ್ನು ಕುರಿತು ಸಾವಿರ ವಾಕ್ಯಗಳನ್ನು ಹೇಳಿ ತಾತನಾದ ದೇವರನ್ನು ಕುರಿತು ಎರಡು ಮೂರು ಕಡೆ ಕೆಲವು ವಾಕ್ಯಗಳನ್ನು ಹೇಳಿದ್ದಾರೆ. ಹತ್ತು, ಹದಿನೈದಕ್ಕಿಂತ ಮೀರಿ ವಾಕ್ಯಗಳು ಇಲ್ಲವೆಂದುಕೊಳ್ಳುತ್ತೇನೆ. ಇಲ್ಲಿಯವರೆಗು ಯಾರಿಗಾಗಲಿ ತಂದೆಯಾದ ದೇವರನ್ನು ಕುರಿತಾಗಲಿ, ತಾತನಾದ ದೇವರನ್ನು ಕುರಿತು ಬೇರೆಯೆಂದು ತಿಳಿದಿಲ್ಲ. ಏನು ಮಾಡದವನೆಂದು ಒಂದುಕಡೆ ಹೇಳಿ, ಎಲ್ಲಾ ಮಾಡುವವನೆಂದು ಇನ್ನೊಂದು ಕಡೆ ಹೇಳಿದಾಗ ಆ ವ್ಯತ್ಯಾಸವನ್ನು ಮನುಷ್ಯರು ಏಕೆ ಗ್ರಹಿಸಲಿಲ್ಲವೋ! ಬುದ್ಧಿ ವಿಚಕ್ಷಣೆ ಏಕೆ ಕೆಲಸ ಮಾಡಲಿಲ್ಲವೊ! ನಾನು ಯಾರಿಗೂ ಸಂತಾನವು ಅಲ್ಲ ನನಗೆ ಯಾರೂ ಸಂತಾನ ಇಲ್ಲವೆಂದು ಹೇಳಿದಾಗ, ಸಮಸ್ತವನ್ನು ನಾನೇ ಸೃಷ್ಠಿಸುತ್ತಿದ್ದೇನೆ ಎಂದು ಹೇಳಿದಾಗ, ಆ ವ್ಯತ್ಯಾಸವನ್ನು ಎಷ್ಟೋ ಬುದ್ಧಿ ಇರುವ ಮನುಷ್ಯರು ಸಹಿತವು ತಿಳಿಯದೆಹೋಗಿದ್ದಾರೆ. ನನ್ನ ಕುಮಾರನನ್ನು ಆರಾಧಿಸಿದವನು ನನ್ನನ್ನು ಆರಾಧಿಸಿದಂತೇಯೆಂದು ದ್ವಿತೀಯ ದೈವಗ್ರಂಥದಲ್ಲಿ ಹೇಳಿದವನು, ತೃತೀಯ ದೈವಗ್ರಂಥವಾದ ಖುರ್‌ಆನ್‌ನಲ್ಲಿ ಆರಾಧಿಸಲ್ಪಡುವ ದೇವರು ಒಬ್ಬನೇ ಇರುವಾಗ ಆ ವ್ಯತ್ಯಾಸವನ್ನು ಗ್ರಹಿಸಲಿಲ್ಲವೇ! ಈ ವಿಧವಾಗಿ ಹೇಳುತ್ತಾಹೋದರೆ ಸೃಷ್ಠಿ ಪೂರ್ವದಲ್ಲಿರುವ ದೇವರು, ಸೃಷ್ಠಿ ನಂತರ ದೇವರು ಎನ್ನುವ ವ್ಯತ್ಯಾಸವನ್ನು ಗ್ರಂಥದಲ್ಲಿ ಹೇಳಿದರೂ ಮನುಷ್ಯರು ಗ್ರಹಿಸದೆ ಹೋಗಿದ್ದಾರೆ.

ಇಂಜೀಲು ಗ್ರಂಥದಲ್ಲಿ **"ನನ್ನ ತಂದೆ ನಾನು ಏಕವಾಗಿದ್ದೇವೆ"** ಎಂದು ಹೇಳಿದ ಮಾತು ಓದುವುದಕ್ಕೆ ಪರಿಮಿತಿಯಾಗಿದೆ ಹೊರತು ತಂದೆ ಯಾರು? ತಾನು ಯಾರು? ಎಂದು ತಿಳಿಯದೆಹೋಗಿದ್ದಾರೆ. ಹಾಗೆಯೇ "ನನ್ನ ಕುಮಾರನನ್ನು ಘನಪಡಿಸಿದವನು ನನ್ನನ್ನು ಘನಪಡಿಸಿದಂತೆ, ನನ್ನ ಕುಮಾರನನ್ನು ಆರಾಧಿಸದವನು ನನ್ನನ್ನು ಆರಾಧಿಸದಂತೆಯೆಂದು, ಕುಮಾರನನ್ನು ಘನಪಡಿಸದವನು ಆತನನ್ನು ಕಳುಹಿಸಿದ ತಂದೆಯನ್ನು ಘನಪಡಿಸುವುದಿಲ್ಲ" "ಎನ್ನುವ ಮಾತನ್ನು ಯಾವ ವಿಧವಾಗಿ ಕ್ರೈಸ್ಥರಾಗಿ ಇರುವವರು ಅರ್ಥ

ಮಾಡಿಕೊಂಡಿದ್ದಾರೋ! ಇಂಜೀಲುನಲ್ಲಿಯೂ, ಖುರ್‌ಆನ್‌ನಲ್ಲಿಯೂ ಹೇಳಿದ ವಾಕ್ಯಗಳು ಎರಡೂ ಒಂದೆಯೆಂದು ತಿಳಿಯದೆ ನಮ್ಮ ಗ್ರಂಥ ಬೇರೆ, ಅವರ ಗ್ರಂಥ ಬೇರೆಯೆನ್ನುವ ಭಾವನೆ ಇರುವಾಗ ಗ್ರಂಥದಲ್ಲಿ ಹೇಳಿದ ದೇವರಿಗೆ ಸಂಬಂಧಿಸಿದ ವಾಕ್ಯಗಳು ಯಾರಿಗೂ ಅರ್ಥವಾಗುವುದಿಲ್ಲ. ಅಷ್ಟೇಕೆ ಒಂದೇ ಗ್ರಂಥದಲ್ಲಿ ಹೇಳಿದ ತಂದೆಯನ್ನು ಕುರಿತು ಕುಮಾರನನ್ನು ಕುರಿತು ಕೂಡಾ ಅರ್ಥ ಆಗಲಿಲ್ಲವೆಂದು, ಹಾಗೇ ಒಂದೇ ಗ್ರಂಥದಲ್ಲಿ ಹೇಳಿದ ಸಂತತಿಯಿಲ್ಲದ ದೇವರನ್ನು, ಸಂತತಿ ಇರುವ ದೇವರನ್ನು ತಿಳಿಯಲಾರದೆಹೋಗಿದ್ದಾರೆ. ದೇವರು ಎರಡು ವಿಧಗಳಾಗಿ ಇದ್ದಾನೆಂದು ಪ್ರಸ್ತುತ ನಡೆಸುವ ದೇವರು ಒಬ್ಬನೆಂದು, ಆತನನ್ನೇ ಆರಾಧಿಸಬೇಕೆಂದು, ಆತನ ನಂತರ ಸಾಕ್ಷಿಯಾಗಿ ಪರಲೋಕವಾಗಿ ಕೂಡಾ ದೇವರೇ ಇದ್ದಾನೆಂದು ಬಹಳಜನ ತಿಳಿಯದೆ ಹೋಗಿದ್ದಾರೆ.

**“ಸೃಷ್ಠಿ ಪೂರ್ವದಲ್ಲಿ ದೇವರು, ಸೃಷ್ಠಿ ನಂತರ ದೇವರು”** ಎನ್ನುವ ಮಾತನ್ನು ಮೊದಲಸಲ ಕೇಳುತ್ತಿರುವ ಕೆಲವರಿಗೆ, ಅವರಿಬ್ಬರನ್ನು ತಿಳಿಯುವುದಕ್ಕೆ ದೈವ ಗ್ರಂಥದಲ್ಲಿ ಖುರ್‌ಆನ್‌ನಲ್ಲಿರುವ ಎರಡು ವಿಧಗಳ ವಾಕ್ಯಗಳನ್ನು ಹೇಳಿಕೊಂಡಿದ್ದೇವೆ. 112ನೇ ಸೂರಾದಲ್ಲಿ ಸೃಷ್ಠಿ ಪೂರ್ವದಲ್ಲಿರುವ ದೇವರು ಹೇಗೆ ಇದ್ದಾನೊ ನಾಲ್ಕು ವಾಕ್ಯಗಳಲ್ಲಿ ಹೇಳಿದ್ದಾರೆ. ಅದರಲ್ಲಿ ಎರಡನೆ ವಾಕ್ಯವನ್ನು ನೋಡಿದರೆ **(112-2) “ದೇವರು ಯಾವ ಅಕ್ಕರೆ ಇಲ್ಲದವನು”** ಸೃಷ್ಠಿ ಪೂರ್ವದಲ್ಲಿ ಏನೂ ಇಲ್ಲ. ಈಗಿರುವ ಪ್ರಪಂಚವೇ ಇಲ್ಲ. ಏನು ಇಲ್ಲದಿರುವಾಗ ಸೃಷ್ಠಿ ಆತನು ಯಾವುದರ ಅಗತ್ಯ ಇಲ್ಲದವನಾಗಿದ್ದಾನೆ. ಸೃಷ್ಠಿ ನಂತರ ಆತನಿಗೆ ಜಗತಿಯನ್ನು ಪಾಲಿಸುವ ಅಗತ್ಯ ಏರ್ಪಟ್ಟಿದೆ. ಆಗ ಸೃಷ್ಠಿ ನಂತರ ದೇವರಾದ ಆತನು ಕೆಲಸವನ್ನು ಮಾಡಬೇಕೆಂದುಕೊಳ್ಳಲಿಲ್ಲ. ಆದ್ದರಿಂದ ಸೃಷ್ಠಿ ಪೂರ್ವ ದಲ್ಲಿರುವ ಆಕಾರವನ್ನು, ಹೆಸರನ್ನು, ಕಾರ್ಯಗಳು ಮಾಡುವ ವಿಧಾನವನ್ನು ಇಲ್ಲದಂತೆ ಮಾಡಿಕೊಂಡಿದ್ದಾನೆ. ಆದರೇ ತಾನೇ ಸೃಷ್ಠಿಸಿದ ಪ್ರಪಂಚವನ್ನು ಯಾವಕಡೆ ಬಿಟ್ಟುಹಾಕಲಿಲ್ಲ. ಸೃಷ್ಠಿ ಪೂರ್ವಕ್ಕಿಂತ ಸೃಷ್ಠಿ ನಂತರ ಭಿನ್ನವಾಗಿರಬೇಕೆಂದು ತಿಳಿದ ದೇವರು ತನ್ನಂತೆ ಅಧಿಕಾರಿಯಾಗಿ ಅಂದರೇ

ದೇವರಾಗಿ ಇರುವುದಕ್ಕೆ, ಪ್ರಪಂಚವನ್ನು ಪಾಲಿಸುವುದಕ್ಕೆ, ಅದಕ್ಕೆ ತಕ್ಕಂತೆ ಕಾರ್ಯಗಳು ಮಾಡುವುದಕ್ಕೆ ಅಗತ್ಯವಾದ ದೇವರನ್ನು ಸೃಷ್ಠಿಸಿ, ತನ್ನ ಅಧಿಕಾರವೆಲ್ಲವನ್ನು ಆತನಿಗೆ ಕೊಟ್ಟು ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನಾಗಿ ಸೃಷ್ಠಿ ನಂತರ ಮೌನವಾಗಿ ಸಾಕ್ಷಿಭೂತನಾಗಿ ನಿಂತುಹೋಗಿದ್ದಾನೆ. ದೇವರಿಗೆ ಸೃಷ್ಠಿ ನಂತರ ಅಗತ್ಯ ಏರ್ಪಟ್ಟಿದೆ ಆದರೆ, ಸೃಷ್ಠಿ ಪೂರ್ವದಲ್ಲಿ ಆತನಿಗೆ ಯಾವ ಅಗತ್ಯ ಇಲ್ಲವೆಂದೇ ಹೇಳಬಹುದು. ಅದೇ ವಿಷಯವನ್ನೇ ಎರಡನೆ ವಾಕ್ಯದಲ್ಲಿ ಹೇಳಿದ್ದಾರೆ. ಸೃಷ್ಠಿ ನಂತರ ಏರ್ಪಟ್ಟಿರುವ ಅಗತ್ಯವನ್ನು ಕೂಡಾ ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಇನ್ನೊಬ್ಬ ದೇವರನ್ನು ಸೃಷ್ಠಿಸಿದ್ದಾನೆ. ಸೃಷ್ಠಿ ನಂತರ ದೇವರು ನೇಮಿಸಿದ ಆತ್ಮವೇ ದೇವರಾಗಿ ಕೆಲಸಗಳನ್ನು ಮಾಡುತ್ತಿದೆ. ಈವಿಷಯವೆಲ್ಲವನ್ನು **ಬುದ್ಧಿಯನ್ನು** ಉಪಯೋಗಿಸಿ ನೋಡಿದರೆ ಅರ್ಥ ವಾಗದಿರುವುದು ಏನೂ ಇಲ್ಲ. ಆದರೇ ಸೃಷ್ಠಿ ಪೂರ್ವದಲ್ಲಿ, ಸೃಷ್ಠಿ ನಂತರ ಇರುವ ಸತ್ಯ ಏಕೆ ತಿಳಿಯಲಿಲ್ಲವೊ?

(112-3) **"ದೇವರಿಗೆ ಸಂತಾನ ಇಲ್ಲ, ಆತನು ಯಾರಿಗೂ ಸಂತಾನವಲ್ಲ"** ಎಂದು ಇದೆ. ಈ ಮಾತು ಸೃಷ್ಠಿ ಪೂರ್ವದಲ್ಲಿ ದೇವರಿಗೆ ಅನ್ವಯಿಸುತ್ತದೆ. ಆಗ ಆತನಿಗೆ ಯಾವ ಅಗತ್ಯವಿಲ್ಲ ಆದ್ದರಿಂದ, ಆತನಿಗೆ ಕುಮಾರನ ಅಗತ್ಯ ಕೂಡಾ ಇಲ್ಲ. ಆಗ ನಿರಾಮಯನಾಗಿ ಇರುತ್ತಿದ್ದನು. ಸೃಷ್ಠಿ ನಂತರ ದೇವರಿಗೆ ಸಂತಾನವಿಲ್ಲ' ಎನ್ನುವ ಪದ ಅನ್ವಯಿಸುವುದಿಲ್ಲ. ಆತನು ಜನ್ಮ ಇಲ್ಲದವನು ಆದ್ದರಿಂದ, ಸೃಷ್ಠಿ ಪೂರ್ವದಲ್ಲಿ ಆತನಿಗೆ ತಂದೆಯಿಲ್ಲವೆಂದು ಹೇಳಬಹುದು, ಆತನು ಯಾರಿಗೂ ಹುಟ್ಟಲಿಲ್ಲವೆಂದು ಹೇಳಬಹುದು. ಸೃಷ್ಠಿಯನ್ನು ಸೃಷ್ಠಿಸಿದ ಸೃಷ್ಠಿಕರ್ತ ವಿಶ್ವವನ್ನು ಸೃಷ್ಠಿಸಿದಾಗಲೇ ತಂದೆಯಾಗಿ ಬದಲಾಗಿಹೋಗಿದ್ದಾನೆ. ನಂತರ ಪ್ರತ್ಯೇಕವಾದ ದೇವರಾಗಿ ತನ್ನ ಕುಮಾರನಾದ ಆತ್ಮವನ್ನು ನೇಮಿಸುವುದರಿಂದ ಆತನ ತಂದೆಯಾದ ದೇವರಾಗಿದ್ದಾನೆ. ಸೃಷ್ಠಿಯಿಲ್ಲದ ಪೂರ್ವದಲ್ಲಿ ದೇವರು ನಿಜವಾಗಲು ಯಾರಿಗೂ ತಂದೆ ಅಲ್ಲ. ಹಾಗೆ ಆತನಿಗೆ ಯಾರೂ ತಂದೆ ಅಲ್ಲ.

(112-4) **"ದೇವರಿಗೆ ಸಮಾನ ಯಾವುದು ಇಲ್ಲ"** ಈ ಮಾತು ಸೃಷ್ಠಿಗೆ ಪೂರ್ವದಲ್ಲಿರುವ ದೇವರಿಗೆ ಅನ್ವಯಿಸುತ್ತದೆ. ಅದೇ ದೇವರಿಗೆ ಈ ಮಾತು ಸೃಷ್ಠಿ ನಂತರ ಅನ್ವಯಿಸುವುದಿಲ್ಲ. ಸೃಷ್ಠಿ ಪೂರ್ವದಲ್ಲಿ ಯಾವುದು ಇಲ್ಲ. ವಿಶ್ವವುಯಿಲ್ಲ, ಮನುಷ್ಯರಾಗಲಿ, ಪ್ರಾಣಿಗಳಾಗಲಿ, ಗ್ರಹಗಳಾಗಲಿ, ಭೂತಗಳಾಗಲಿ ಯಾವು ಇಲ್ಲದಿರುವಾಗ ಆತನಿಗೆ ಸಾಟಿಯಾಗಿ (ಸಮಾನವಾಗಿ) ಹೋಲಿಸಿ ಹೇಳುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ವಾಕ್ಯದಲ್ಲಿ ಆತನಿಗೆ ಸಮಾನ ಯಾವುದು ಇಲ್ಲವೆಂದು ಹೇಳಿದ್ದಾರೆ. ಸೃಷ್ಠಿ ನಂತರ ದೇವರು ತನಗೆ ಸಮಾನವಾಗಿ ತನ್ನ ಕುಮಾರನಿಗೆ ಅಧಿಕಾರಕೊಟ್ಟು ತನ್ನೊಂದಿಗೆ ಸಮಾನವಾಗಿ ಇರುವಂತೆ, ತನ್ನೊಂದಿಗೆ ಸಮಾನವಾಗಿ ಪ್ರಪಂಚ ಕಾರ್ಯ್ಗಗಳನ್ನು ಮಾಡುವಂತೆ, ತನಗೆ ಸಮಾನವಾಗಿ ದೇವರಂತೆ ಇರುವುದಕ್ಕೆ ಅಧಿಕಾರಕೊಟ್ಟಿದ್ದಾನೆ. ಅಂದಿನಿಂದ ದೇವರು ಸಾಕ್ಷಿಯಾಗಿ ನಿಂತುಹೋದಾಗ, ದೇವರಿಗೆ ಸಮಾನವಾಗಿ ಆತ್ಮವೇ ಬದಲಾಗಿ ದೇವರಾಗಿ ಇರುವುದೇ ಅಲ್ಲದೇ, 6–102 ವಾಕ್ಯದಲ್ಲಿ ಹೇಳಿದಂತೆ ದೇವರು ಎಲ್ಲದಕ್ಕು ಅಧಿಪತಿಯಾಗಿದ್ದಾನೆ ಮತ್ತು ಕಾರ್ಯಕರ್ತನಾಗಿ ಇದ್ದಾನೆಂದು ಹೇಳುವುದು ನಡೆದಿದೆ.

ದೇವರೊಂದಿಗೆ ಸಮಾನವಾಗಿ ಮತ್ತೊಂದು ದೇವರಾಗಿ ದೇವರೇ ತನ್ನ ಆಜ್ಞೆಯಿಂದ ಆತ್ಮವನ್ನು ದೇವರಾಗಿ ಮಾಡಿದ್ದಾನೆ. ದೇವರೊಂದಿಗೆ ಸಮಾನವಾಗಿರುವ ದೇವರು ಬಂದ ನಂತರ ಮೊದಲಿದ್ದ ದೇವರು ಚಲನೆ ವಲನೆಯಿಲ್ಲದೆ ಸ್ಥಬ್ಧತೆಯಾಗಿ ನಿಂತುಹೋಗುವುದರಿಂದ, ಪ್ರಜೆಗಳೆಲ್ಲರೂ ದೇವರಾಗಿರುವವನನ್ನೇ ದೇವರೆಂದು ಹೇಳುತ್ತಾ ಆತನನ್ನೇ ವಿಶ್ವಾಸಿಸಿದ್ದಾರೆ. ಮನುಷ್ಯರೆಲ್ಲರಿಗೂ ದೇವರೊಂದಿಗೆ ಸಮಾನವಾಗಿರುವ ದೇವರು ತಿಳಿಯುತ್ತಾನೆ ಆದರೆ, ಅಸಲಾದ ತಾತನಾದ ದೇವರು ತಿಳಿಯಲ್ಪಡಲಿಲ್ಲ. ಈದಿನ ಗ್ರಂಥಗಳಲ್ಲಿ ಬರೆದುಕೊಂಡಿರುವುದು, ವಿಶ್ವಾಸಿಸುವುದು. ಆರಾಧಿಸವುದು. ದೊಡ್ಡದಾಗಿ ಹೇಳಿಕೊಳ್ಳುವುದು ಈದಿನ ಪ್ರಪಂಚದಲ್ಲಿ ಕಾರ್ಯಕರ್ತನಾಗಿ, ಅಧಿಪತಿಯಾಗಿರುವ ದೇವರನ್ನೇಯೆಂದು ತಿಳಿಯಬೇಕು. ಈ ದೇವರೇ ಎಲ್ಲರನ್ನು ಸೃಷ್ಠಿಸಿರುವುದರಿಂದ

ಈದಿನ ನಮಗೆ ತಿಳಿದಿರುವ, ನಾವು ಹೇಳಿಕೊಳ್ಳುತ್ತಿರುವ ದೇವರನ್ನು ತಂದೆಯೆಂದು ಹೇಳಬಹುದು. ತಂದೆಯಾದ ದೇವರನ್ನು ಸೃಷ್ಠಿಸಿದ, ಸೃಷ್ಠಿ ಪೂರ್ವದಲ್ಲಿರುವ ದೇವರನ್ನು, ಈದಿನ ಮೌನವಾಗಿರುವ ದೇವರನ್ನು, ನಮ್ಮ ಶರೀರದಲ್ಲಿಯೇ ಸಾಕ್ಷಿಯಾಗಿರುವ ದೇವರನ್ನು ತಾತಯೆಂದು ಹೇಳಬಹುದು. ನಮ್ಮ ತಂದೆಗೆ ತಂದೆಯಾದ ದೇವರನ್ನು ಯಾರಾದರೂ ತಾತಯೆಂದು ಹೇಳಬೇಕಾದ್ದೆ. ವಿಶ್ವವೆಲ್ಲಾ ವ್ಯಾಪಿಸಿ. ಶರೀರದಲ್ಲಿ ಕೂಡಾ ಇರುವ ತಾತನಾದ ದೇವರು, ಶರೀರದಲ್ಲಿ ಸಾಕ್ಷಿಯಾಗಿರುವುದರಿಂದ ಆತನಿಗೆ ಸೃಷ್ಠಿ ಪೂರ್ವದಲ್ಲಿ ಆತನಿಗೆ ಸಾಟಿಯಾದವರು ಯಾರೂ ಇಲ್ಲವೆಂದು ಹೇಳಬಹುದು.

ನಾನು ಬಹಳಸಲ ಬಹಿರಂಗವಾಗಿಯೇ ನನಗೆ ಖುರ್‌ಆನ್ ಗ್ರಂಥದಲ್ಲಿ 112ನೇ ಸುರಾ ಚೆನ್ನಾಗಿ ಇಷ್ಟವಾದ ಸೂರಾಯೆಂದು ಹೇಳಿದ್ದೇನೆ. ಅಷ್ಟೇ ಅಲ್ಲದೆ ಅದರಲ್ಲಿನ ನಾಲ್ಕು ಆಯತ್‌ಗಳು ಎಷ್ಟೋ ಬೆಲೆಯುಳ್ಳವಾಗಿ ಹೇಳಿದ್ದೇನೆ. ಆದರೇ ತಾತನಾದ ದೇವರು ಮುಖ್ಯವಾದರೆ ತಂದೆಯಾದ ದೇವರು ನಿನಗೆ ಮುಖ್ಯ ಅಲ್ಲವೆ! ಎಂದು ನನ್ನನ್ನು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನನ್ನ ಉತ್ತರ ಏನೆಂದರೆ! ತಾತನಾದ ದೇವರೇ ಮಾಯೆಮಾಡಿ ತಂದೆಯಾದ ದೇವರಾಗಿ ಕೂಡಾ ಇದ್ದಾನೆಂದು ನನಗೆ ತಿಳಿದಿದೆ. ಆದ್ದರಿಂದ ಆತನು ಈತನು ಇಬ್ಬರೂ ಒಂದೇಯೆಂದು ನನಗೆ ಚೆನ್ನಾಗಿ ತಿಳಿದಿದೆ. ದೇವರು ಒಬ್ಬನೇ ಇದ್ದಾನೆ. ಆತನು ಮಾರುವೇಷದಲ್ಲಿ ತನ್ನ **ಆತ್ಮ** ಎನ್ನುವ ಹೆಸರಿನಿಂದ ತಾನೇ ಬಂದಿದ್ದಾನೆ. ಆದ್ದರಿಂದ ನೋಡುವುದಕ್ಕೆ, ಹೇಳುವುದಕ್ಕೆ ಬೇರೆಬೇರೆಯಾಗಿದ್ದರೂ **ತಂದೆ, ಕುಮಾರನು ಇಬ್ಬರೂ ಒಂದೇ**. ಆದ್ದರಿಂದ ಇಂಜೀಲು ಗ್ರಂಥದಲ್ಲಿ ಯೊಹಾನು ಸುವಾರ್ತೆ 10ನೇ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**(ಯೋಹಾನ್ 10-30) "ನಾನೂ ತಂದೆಯೂ ಏಕವಾಗಿದ್ದೇವೆಂದು ಅವರೊಂದಿಗೆ ಹೇಳಿದನು."**

ಇನ್ನೂ 14ನೇ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**(ಯೋಹಾನ್ 14-10) "ತಂದೆಯಲ್ಲಿ ನಾನೂ, ನನ್ನಲ್ಲಿ ತಂದೆಯು ಇದ್ದೇವೆಂದು ನೀನು ನಂಬುವುದಿಲ್ಲವಾ! ನಾನು ನಿಮ್ಮೊಂದಿಗೆ ಹೇಳುತ್ತಿರುವ ಮಾತುಗಳು ನನ್ನಷ್ಟಕ್ಕೆ ನಾನು ಹೇಳುತ್ತಿಲ್ಲ. ತಂದೆ ನನ್ನಲ್ಲಿ ನಿವಾಸಿಸುತ್ತಾ ತನ್ನ ಕ್ರಿಯೆಗಳು ಮಾಡುತ್ತಿದ್ದಾನೆ."**

ಈ ಮಾತುಗಳು ಕೇಳಿದ ನಂತರ ಇಬ್ಬರು ದೇವರುಗಳಿದ್ದಾರೆಂದು ನಂಬದಿದ್ದರೂ ತಪ್ಪೇ. ಇಬ್ಬರು ದೇವರುಗಳು ಒಬ್ಬರೇಯೆಂದು ತಿಳಿಯದಿದ್ದರೂ ತಪ್ಪೇ ಆಗುತ್ತದೆ. ಈ ವಿಷಯ ತಿಳಿಯದವರೆಗು ಮನುಷ್ಯ ಅಜ್ಞಾನದಲ್ಲಿಯೇ ಇದ್ದಾನೆಂದು ಹೇಳಬಹುದು. ದೇವರ ವಿಷಯ ಎಂದರೇ ಜ್ಞಾನ ಬಹಳ ಕಷ್ಟವಾದುದು. ದೇವರ ಜ್ಞಾನ ಸುಲಭವಾಗಿ ಅರ್ಥವಾಗುವುದಿಲ್ಲ. ದೇವರು 112ನೇ ಸೂರಾದಲ್ಲಿ ತನ್ನ ನಾಲ್ಕು ವಾಕ್ಯಗಳ ಮೂಲಕ ತನ್ನ ಪೂರ್ವದ ಸ್ಥಿತಿಯನ್ನು ತಿಳಿಸಿದ್ದಾನೆ. ಹಾಗೆಯೇ ಜಿಬ್ರಯೇಲ್ ಮೂಲಕ ಸೃಷ್ಠಿ ನಂತರ ತಾನು ಮಾಯೆಯಾಗಿ ಯಾರಿಗೂ ತಿಳಿಯದಂತೆ ಹೇಗೆ ಇದ್ದಾನೊ ಕೂಡಾ ಅಂತಿಮ ದೈವಗ್ರಂಥದಲ್ಲಿ ಎಷ್ಟೋ ವಾಕ್ಯಗಳಲ್ಲಿ ಹೇಳಿದ್ದಾನೆ. ಎಷ್ಟೋ ನೂರಾರು ವಾಕ್ಯಗಳಿಂದ ಕೇವಲ ನಾಲ್ಕುವಾಕ್ಯಗಳನ್ನು ನಮೂನೆಯಾಗಿ ತೆಗೆದುಕೊಂಡಿದ್ದೇವೆ. ಆ ನಾಲ್ಕು ವಾಕ್ಯಗಳನ್ನು ಕುರಿತು ವಿವರಿಸಿಕೊಂಡು ನೋಡಿದಂತಾದರೆ ದೇವರು ಸೃಷ್ಠಿ ನಂತರ ಹೇಗೆ ಇದ್ದಾನೊ ತಿಳಿಯಬಲ್ಲದು.

ಈಗ ಸೂರಾ 3 ಆಯತ್ 18ರಲ್ಲಿ ಇರುವ ವಿಷಯವನ್ನು ನೋಡೋಣ. **(3-18) "ಅಲ್ಲಾಹ್ ಹೊರತು ಮತ್ತೊಬ್ಬ ಆರಾಧ್ಯದೈವ ಇಲ್ಲವೆಂದು, ಸ್ವತಃವಾಗಿ ದೇವರು, ದೇವರ ದೂತರು ಮತ್ತು ಜ್ಞಾನ ಸಂಪನ್ನರಾದವರು ಸಾಕ್ಷ್ಯಗಳನ್ನು ಕೊಡುತ್ತಿದ್ದಾರೆ. ಆತನ ಸಾಮರ್ಥ್ಯ, ಸಮತೂಕದಿಂದ ಈ ವಿಶ್ವವನ್ನು ನಿಲ್ಲಿಸಿಟ್ಟಿದ್ದಾನೆ. ಸರ್ವಾಧಿಕ್ಯನು, ವಿವೇಚನಾಶಾಲಿಯಾದ ದೇವರು ಹೊರತು ಮತ್ತೊಬ್ಬರು ಯಾರೂ ಆರಾಧನೆಗೆ ಅರ್ಹರು ಅಲ್ಲ"**. ಈ ವಾಕ್ಯದಲ್ಲಿ ದೇವರು ಒಬ್ಬನೇ ಪೂಜಿಸಲ್ಪಡುವ ವನು ಎಂದು ಹೇಳುತ್ತಾ ಆತನೇ ದೊಡ್ಡ ವಿವೇಚನಾಶಾಲಿ ಎಂದು ಹೇಳಿದ್ದಾರೆ. 'ವಿವೇಚನಾಶಾಲಿ' ಎಂದರೇ ಬುದ್ಧಿ ಸಾಮರ್ಥ್ಯ ದೊಡ್ಡದಾಗಿರುವವನೆಂದು, ಎಲ್ಲದಕ್ಕು ಅಧಿಪತಿಯೆಂದು ಹೇಳುವುದಾಗಿದೆ. ಹೇಳಿದವರು ದೇವರು,

ದೇವದೂತರು, ಜ್ಞಾನ ಸಂಪನ್ನರೆಂದು ಕೂಡಾ ಹೇಳಿದ್ದಾರೆ. 'ಅಲ್ಲಾ ಹೊರತು ಬೇರೆ ಆರಾಧ್ಯದೈವ ಇಲ್ಲವೆಂದು' ದೇವದೂತರು ಹೇಳಬಹುದು. ಜ್ಞಾನ ಇರುವವರು ಹೇಳಬಹುದು. ದೇವರು ಕೂಡಾ ಸ್ವತಃವಾಗಿ 'ದೇವರು ಒಬ್ಬನೇ ಆರಾಧ್ಯನೆಂದು' ಹೇಗೆ ಹೇಳುತ್ತಾನೆ? ಹಾಗೆ ಹೇಳಿದ್ದಾನೆ ಎಂದರೆ ಒಬ್ಬ ದೇವರು ಇನ್ನೊಬ್ಬ ದೇವರನ್ನು ಕುರಿತು ದೊಡ್ಡದಾಗಿ ಹೇಳಿದಂತಲ್ಲವೆ! ನಿಜಕ್ಕು ಅಷ್ಟೇ! ವಾಕ್ಯದಲ್ಲಿನ ಸೂಕ್ಷ್ಮ ಭಾವನೆಯನ್ನು ನೋಡಿದರೆ ಮೊದಲ ದೇವರು ಎರಡನೆ ದೇವರನ್ನು ಕುರಿತು ಹೇಳಿದ್ದಾನೆಂದಲ್ಲವೇ ಅರ್ಥ. ದೇವರೇ ನಿಜವಾದ ಆರಾಧ್ಯ ದೈವವೆಂದು' ತನನ್ನು ಕುರಿತು ತಾನು ಯಾವ ದೇವರು ಹೇಳುವುದಿಲ್ಲ. ಹಾಗೆ ಹೇಳಿದ್ದಾನೆಂದರೆ ಆತನು ಇನ್ನೊಂದು ದೇವರೇಯೆಂದು ತಪ್ಪದೆ ಹೇಳಬಹುದು. ದೈವ ಗ್ರಂಥಗಳಲ್ಲಿ ಬರೆದ ವಾಕ್ಯದ ಪ್ರಕಾರ ಸೃಷ್ಠಿ ಪೂರ್ವದಲ್ಲಿರುವ ದೇವರು, ಸೃಷ್ಠಿ ನಂತರ ತಾನು ತಯಾರು ಮಾಡಿದ ದೇವರನ್ನು ಕುರಿತು ಹೇಳಿದ್ದಾನೆಂದು ಅರ್ಥವಾಗುತ್ತಿದೆ. ಈ ವಿಧವಾಗಿ ಉಳಿದ ವಾಕ್ಯಗಳು ಕೂಡಾ ಸೃಷ್ಠಿ ಪೂರ್ವದಲ್ಲಿರುವ ದೇವರಿಗೆ ಭಿನ್ನವಾಗಿ ಇರುವುದರಿಂದ ಮೊದಲ ದೇವರು ಬೇರೆ, ನಂತರ ದೇವರು ಬೇರೆಯೆಂದು ಅರ್ಥವಾಗುತ್ತಿದೆ. ಎರಡನೆ ದೇವರನ್ನು ಆರಾಧಿಸಿರೆಂದು, ಆತನೇ ದೊಡ್ಡವನೆಂದು ಗ್ರಂಥದಲ್ಲಿ ಅನೇಕಕಡೆ ಇರುವುದರಿಂದ ಎರಡನೆ ದೇವರೇ ಪ್ರಪಂಚವೆಲ್ಲ ಪ್ರಚಾರವಾಗಿದ್ದಾನೆ ಆದರೆ, ಮೊದಲ ದೇವರು ಪ್ರಚಾರ ಮಾಡಿದ ದೇವರೇ ಮೂರು ಮತ ಗ್ರಂಥಗಳಲ್ಲಿ ಆರಾಧಿಸಲ್ಪಟ್ಟ ದೇವರಾಗಿ ಹೇಳಲ್ಪಟ್ಟಿದ್ದಾನೆ. ನಮ್ಮ ರಚನೆಯಲ್ಲಿನ **"ವಿಶ್ವ ವಿದ್ಯಾಲಯ"** ಎನ್ನುವ ಗ್ರಂಥದಲ್ಲಿ ಕೂಡಾ ಮೊದಲಿರುವ ದೇವರನ್ನು ಅಲಂಕಾರ ಪ್ರಾಯವಾಗಿ ಇಟ್ಟು ಆತನು ಪ್ರಪಂಚದಲ್ಲಿನ ವಿಷಯಗಳನ್ನು ಜೋಕ್ಯ ಮಾಡಿಕೊಳ್ಳಲಿಲ್ಲವೆಂದು ಪ್ರಪಂಚವನ್ನು ಮತ್ತು ಪ್ರತಿ ಮನುಷ್ಯನನ್ನು ನಡೆಸುವ ದೇವರು ಪ್ರತ್ಯೇಕವಾಗಿ ಇದ್ದಾನೆಂದು, ಪ್ರಪಂಚವನ್ನು ನಡೆಸುವುದಕ್ಕೆ ಮೊದಲ ದೇವರೇ ಎರಡನೆ ದೇವರನ್ನು ತಯಾರು ಮಾಡಿ, ಆತನೇ ನಿಮಗೆ ಆರಾಧ್ಯ ದೈವವೆಂದು ಹೇಳಿದ್ದಾನೆಂದು ಬರೆದಿದ್ದೇವೆ. ಅದೇ ವಿಷಯವೇ ಅಂತಿಮದೈವ ಗ್ರಂಥದಲ್ಲಿ ಖುರ್‌ಆನ್‌ನಲ್ಲಿ ಸೂರಾ ಮೂರರಲ್ಲಿ 18ನೇ ಆಯತ್‌ನಲ್ಲಿ ಸ್ವತಃವಾಗಿ ದೇವರೇ

ಪ್ರಜೆಗಳ ಆರಾಧ್ಯ ದೈವವನ್ನು ತೋರಿಸಿ ಹೇಳಿದಂತೆ ಇದೆ. ಅದೇ ವಿಷಯವನ್ನೇ ನಾನು ಕೂಡಾ ಹೇಳಿದ್ದೇನೆ. ಮೊದಲ ದೇವರು ಎಲ್ಲಾ ಅಧಿಕಾರಗಳನ್ನು ಎರಡನೆ ದೇವರಿಗೆ ಕೊಟ್ಟು ಆತನನ್ನೇ ಆರಾಧಿಸಿರೆಂದಾಗ ಮೊದಲ ದೇವರೊಂದಿಗೆ ಕೆಲಸವೇನೆಂದೂ, ಆತನು ಇದ್ದರೂ ಇಲ್ಲದಂತೆ ಅಲ್ಲವೆ! ಎಂದು, ಹಾಗಿರುವಾಗ ತಾತನಾದ ಮೊದಲ ದೇವರು ಶರೀರದಲ್ಲಿ ಸಾಕ್ಷಿಯಾಗಿ ಇರಬೇಕಾದ ಅಗತ್ಯ ಏನು ಬಂದಿದೆ? ಎಂದು ಕೂಡಾ ನಾವೇ ಪ್ರಶ್ನೆಹಾಕಿ, ಮೊದಲ ದೇವರ ಅಗತ್ಯವನ್ನು ಕೂಡಾ ಹೇಳಿದ್ದೇವೆ.

ಈ ದಿನ ಪ್ರಪಂಚ ವ್ಯಾಪ್ತವಾಗಿ ಜ್ಞಾನ, ಭಕ್ತಿಯೆಂದು ಹೇಳಿದರೆ ಅದೆಲ್ಲವೂ ಎಲ್ಲರಿಗೂ ತಂದೆಯಾದ ಎರಡನೆ ದೇವರ ಮೇಲೆಯೇ ಇದೆ. ಮೂರು ದೈವ ಗ್ರಂಥಗಳು ಕೂಡಾ ಎಲ್ಲರಿಗೂ ತಂದೆಯಾಗಿರುವ ದೇವರನ್ನು ಕುರಿತೇ ಹೇಳಲ್ಪಟ್ಟಿವೆ. ತಾತನಾದ ದೇವರ ವಿಷಯ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಮೂರು ದೈವ ಗ್ರಂಥಗಳಲ್ಲಿ ತಾತನಾದ ದೇವರನ್ನು ಕುರಿತು ಬಹುಸ್ವಲ್ಪ ಸಮಾಚಾರ ಇದ್ದರೂ ಅದು ಪ್ರತ್ಯೇಕಿಸಿದ ಸಮಾಚಾರವೆಂದು, ಮೊದಲ ದೇವರಿಗೆ ಸಂಬಂಧಿಸಿದ ಜ್ಞಾನ ವಿಷಯವೆಂದು ಯಾರೂ ತಿಳಿಯದೆ ಹೋಗಿದ್ದಾರೆ. ನಾವು ಮೂರು ಮತಗಳಲ್ಲಿನ ಜ್ಞಾನಿಗಳನ್ನು ಗಮನಿಸಿ ನೋಡಿದ್ದೇವೆ. ಈದಿನ ಎಷ್ಟು ದೊಡ್ಡ ಸ್ವಾಮೀಜಿಗಳಾಗಲಿ, ಎಷ್ಟು ದೊಡ್ಡ ಮತಹಿರಿಯರಾಗಲಿ, ಗುರುಗಳಾಗಿರುವವರು, ಬೋಧಕರಾಗಿ ಇರುವವರಾಗಲಿ ಎರಡನೆ ದೇವರನ್ನೇ ಹೇಳುತ್ತಿದ್ದಾರೆ. ಸೃಷ್ಠಿ ನಂತರದ ದೇವರನ್ನು ಹೇಳುತ್ತಿದ್ದಾರೆ. ಸೃಷ್ಠಿ ಮೊದಲಿನ ದೇವರನ್ನು ಕುರಿತು ಹೇಳುತ್ತಿಲ್ಲ. ಆದುದರಿಂದ ಅವರೆಲ್ಲರಿಗೂ ಒಟ್ಟಾರೆ ಮೂರು ಮತದವರಿಗೆ 'ದೇವರು' ಎನ್ನುವ ವಿಷಯ ತಿಳಿದಿದೆ, ದೇವರು ಒಬ್ಬನೇ ಎನ್ನುವ ವಿಷಯ ತಿಳಿದಿದೆ, ಆ ಒಬ್ಬ ದೇವರನ್ನೇ ಆರಾಧಿಸಬೇಕೆಂದು ತಿಳಿದಿದೆ. ಆದರೇ ಆ ದೇವರು ಸೃಷ್ಠಿ ಪೂರ್ವದಲ್ಲಿದ್ದವನಾ! ಸೃಷ್ಠಿ ನಂತರದವನಾ!! ಎನ್ನುವ ವಿಷಯ ಮಾತ್ರ ತಿಳಿದಿಲ್ಲ. ಸೃಷ್ಠಿ ಪೂರ್ವವಿದ್ದ ದೇವರು ತಾನೇ ಸ್ವತಃವಾಗಿ ಆತ್ಮವನ್ನು ದೇವರಾಗಿ ಪ್ರಕಟಿಸಿ, ಆತ್ಮಗೆ ತನಗಿರುವ

ಅಧಿಕಾರಗಳು ಕೊಟ್ಟು, ತನ್ನೊಂದಿಗೆ ಸಮಾನವಾಗಿ ಮಾಡಿ ಮಾನವರೆಲ್ಲರಿಗೂ ದೇವರಾಗಿರುವಂತೆ ಮಾಡಿದ್ದಾನೆಂದು ತಿಳಿಯಲಾರದೆ ಹೋಗಿದ್ದಾರೆ.

ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ 700 ಶ್ಲೋಕಗಳು ಇವೆ. ಅದರಲ್ಲಿ ಸುಮಾರು ನೂರು ಶ್ಲೋಕಗಳು ಮೊದಲ ದೇವರನ್ನು ಕುರಿತು ಹೇಳಿದಾಗ, ಉಳಿದ ಶ್ಲೋಕಗಳೆಲ್ಲ ಎರಡನೇ ದೇವರನ್ನು ಕುರಿತು ಹೇಳಿರುವವೇ ಇವೆ. ಶೇಕಡಕ್ಕಿಂತ ಹೆಚ್ಚು ದೇವರನ್ನು ಕುರಿತು ಹೇಳಿರುವವೇ ಇವೆ. ಶೇಕಡಕ್ಕಿಂತ ಹೆಚ್ಚು ದೇವರನ್ನು ಕುರಿತು ಇರುವಾಗ ಅವುಗಳನ್ನು ನೋಡಿದವರು ಮೊದಲ ದೇವರನ್ನು ಕುರಿತು ಹೇಳಿದ ಶ್ಲೋಕಗಳನ್ನು ಕೂಡಾ ಎರಡನೆ ದೇವರ ಶ್ಲೋಕಗಳಾಗಿಯೇ ಲೆಕ್ಕಿಸಿಕೊಂಡಿದ್ದಾರೆ. ಭಗವದ್ಗೀತೆಯಲ್ಲಿ ಮೊದಲ ದೇವರನ್ನು ಎರಡನೆ ದೇವರನ್ನು ಕುರಿತು ಇರುವಂತೆ, ಇಂಜೀಲು ಎನ್ನುವ ಬೈಬಲ್ ಗ್ರಂಥದಲ್ಲಿ ಕೂಡಾ ಹೆಚ್ಚಿನ ವಾಕ್ಯಗಳು ಎರಡನೆ ದೇವರನ್ನು ಕುರಿತು ಇರುವಾಗ, ಕಡಿಮೆ ವಾಕ್ಯಗಳು ಮೊದಲಿನ ದೇವರನ್ನು ಕುರಿತು ಇವೆ. ಅದೇ ವಿಧವಾಗಿ ಅಂತಿಮ ದೈವಗ್ರಂಥಕ್ಕಿಂತ ಹೆಚ್ಚಾಗಿ ಮೊದಲ ದೇವರನ್ನು ಕುರಿತು ಹೇಳಲಿಲ್ಲ ವೆಂದು ಮೊದಲೇ ಹೇಳಿದ್ದೇವೆ. ಉದಾಹರಣೆಗೆ ಖುರ್ಆನ್‌ನಲ್ಲಿ 112ನೇ ಸೂರಾದಲ್ಲಿ ಪ್ರಥಮ ದೇವರನ್ನು ಕುರಿತಾದ ನಾಲ್ಕು ವಾಕ್ಯಗಳನ್ನು ಹೇಳಿ ಅವುಗಳ ವಿವರವನ್ನು ಕೂಡಾ ಹೇಳಿದ್ದೇವೆ. ಹಾಗೇ ಎರಡನೆ ದೇವರನ್ನು ಕುರಿತಾದ ನಾಲ್ಕು ವಾಕ್ಯಗಳನ್ನು ಕೂಡಾ ತೋರಿಸಿದ್ದೇನೆ. ಅದರಲ್ಲಿ ಒಂದು ವಾಕ್ಯವನ್ನು (3–18) ಮಾತ್ರ ವಿವರಿಸಿ ಹೇಳಿದ್ದೇವೆ. ಈ ವಾಕ್ಯಗಳಲ್ಲಿ ಸ್ವತಃವಾಗಿ ಮೊದಲ ದೇವರೇ "ಎರಡನೆ ದೇವರೊಬ್ಬನೆ ಆರಾಧ್ಯನಾಗಿ ಅರ್ಹನು" ಎಂದು ಹೇಳಿದಂತಿದೆಯೆಂದು ತೋರಿಸಿದ್ದೇವೆ.

(22-66) **"ನಿಮಗೆ ಜೀವವನ್ನು ಪ್ರಸಾದಿಸಿದವನು ಮತ್ತು ಆತನೇ ನಿಮಗೆ ಮರಣವನ್ನು ಕೊಡುತ್ತಾನೆ. ಆತನೇ ನಿಮ್ಮನ್ನು ಪುನಃ ಬದುಕಿಸುತ್ತಾನೆ. ಆದರೂ ಮಾನವನು ದೇವರ ಒಳಿತನ್ನು ಮರೆಯುವವನು".**

ಈ ವಾಕ್ಯದಲ್ಲಿ ದೇವರು ಮನುಷ್ಯನಿಗೆ ಜೀವನ ಪ್ರಸಾದಿಸುವುದಕ್ಕೆ ಹುಟ್ಟಿಸುವುದು ನಂತರ ತಾನೇ ಮರಣಿಸುವಂತೆ ಮಾಡುವುದು, ಪುನಃ ಹುಟ್ಟಿಸುವುದು ಎನ್ನುವ ಕಾರ್ಯವನ್ನು ಚಕ್ರದಂತೆ ಮಾತು ಮಾತಿಗು ನಡೆಯುವಂತೆ ಮಾಡುತ್ತಿದ್ದಾನೆಂದು ಹೇಳುವುದರಿಂದ ಶರೀರದಲ್ಲಿ ಕಾರ್ಯ ಕರ್ತನಂತೆ ಕೆಲಸ ಮಾಡುವವನನ್ನು ಎರಡನೆ ದೇವರೆಂದು ಸುಲಭವಾಗಿ ಗ್ರಹಿಸಬಹುದು. ಮೊದಲ ದೇವರು ಯಾವ ಕಾರ್ಯವನ್ನು ಮಾಡುವುದಿಲ್ಲವೆಂದು, ಆತನು ನೋಡುತ್ತಾ ಸಾಕ್ಷಿಯಾಗಿ ಇರುವವನೇಯೆಂದು ಹೇಳಿಕೊಂಡಿದ್ದೇವೆ. ಆದುದರಿಂದ ಈ ವಾಕ್ಯ ಮೊದಲ ದೇವರದ್ದು ಅಲ್ಲವೆಂದು ಸುಲಭವಾಗಿ ಗ್ರಹಿಸಬಹುದು. ಈ ವಿಧವಾಗಿ ಕಾರ್ಯಗಳನ್ನು ಮಾಡುವವನು ಎರಡನೆ ದೇವರೆಂದು, ಕಾರ್ಯಗಳನ್ನು ಮಾಡದವನನ್ನು ಮೊದಲ ದೇವರೆಂದು ಗ್ರಹಿಸಬೇಕು. ಮೊದಲ ದೇವರು ಎರಡನೆ ದೇವರನ್ನು ತಯಾರು ಮಾಡಿ, ಅಧಿಕಾರಗಳೆಲ್ಲ ಎರಡನೆ ದೇವರಿಗೆ ಕೊಟ್ಟು, ಎಲ್ಲರೂ ಆತನನ್ನೇ ಆರಾಧಿಸಿರೆಂದು ಹೇಳಿದ್ದಾನೆ. ಹಾಗೆ ಆರಾಧಿಸದೆ ಹೋದರೆ ನನ್ನನ್ನು ಆರಾಧಿಸದಂತೆಯೆಂದು, ನಾನು ಹೇಳಿದಂತೆ ಕೇಳಿ ಎರಡನೇ ದೇವರನ್ನು ಆರಾಧಿಸಿದರೇ ನನ್ನನ್ನು ಆರಾಧಿಸಿದಂತೆಯೆಂದು, ಅದರಿಂದ ಆತನಿಗೆ **ಮೋಕ್ಷ** ಲಭಿಸುತ್ತದೆಂದು ಹೇಳಿದ್ದಾನೆ. ಎಡನೇ ದೇವರು ನಿಮ್ಮ ಶರೀರದಲ್ಲಿದ್ದು ನಿಮಗೆ ಜನನವನ್ನು ನಂತರ ಮರಣವನ್ನು ಕೊಡುವುದಲ್ಲದೇ, ಮರಣಿಸಿದವನಿಗೆ ತಕ್ಷಣ ಜೀವವನ್ನು ಉಂಟುಮಾಡುತ್ತಿದ್ದಾನೆಂದು ಹೇಳಿದ್ದಾನೆ. ಅಷ್ಟು ಕಾರ್ಯವನ್ನು ಮಾಡಿದರೂ, ದೇವರ ಒಳ್ಳೆಯತನವನ್ನು ಕೆಲವರು ಮರೆತುಹೋಗಿ ದೇವರನ್ನು ಸ್ವಲ್ಪವಾದರೂ ಜ್ಞಾಪಕ ಮಾಡಿಕೊಳ್ಳದೆ ಅನ್ಯ ದೇವತೆಗಳನ್ನು ಆರಾಧಿಸುತ್ತಾ, ಅವರನ್ನೇ ಹೊಗಳುತ್ತಿದ್ದಾರೆ ಎಂದು ದೇವರು ತಿಳಿಸಿದ್ದಾನೆ. ಈಗ ಇನ್ನೊಂದು ವಾಕ್ಯವನ್ನು ನೋಡೋಣ.

(29-44) **"ಅಲ್ಲಾಹ್ ಆಕಾಶಗಳನ್ನು, ಭೂಮಿಯನ್ನು ಸತ್ಯಬದ್ಧವಾಗಿ ಸೃಷ್ಟಿಸಿದ್ದಾನೆ. ಆಕಾಶಗಳನ್ನು ಭೂಮಿಯನ್ನು ಪರಮಾರ್ಥದಿಂದ ಸೃಷ್ಟಿಸಿದ್ದಾನೆಂದು ತಿಳಿದರೇ ಇದರಲ್ಲಿ ದೊಡ್ಡ ನಿದರ್ಶನ ಇದೆ"**.

ಈ ವಾಕ್ಯವೂ ಕೂಡಾ ತಂದೆಯಾದ ಎರಡನೆ ದೇವರನ್ನು ಉದ್ದೇಶಿಸಿ ಹೇಳಿರುವುದೆಯೆಂದು ತಿಳಿಯಬೇಕು. ನಿಮಗೆ ಅರ್ಥವಾಗುವುದಕ್ಕೆ "ಎರಡನೆ ದೇವರು" ಎಂದು ಹೇಳುತ್ತಿದ್ದೇನೆ. ಆದರೂ ಎಲ್ಲರೂ ಆರಾಧಿಸುವುದು ಎರಡನೆ ದೇವರನ್ನೇ. ತಾತನಾಗಿರುವ ಮೊದಲ ದೇವರು ಆದಿಯಲ್ಲಿ ಆಕಾಶಗಳನ್ನು ಮೊದಲುಗೊಂಡು ಭೂಮಿಯವರೆಗು ಸೃಷ್ಠಿಸಿದ್ದಾನೆ ಅಲ್ಲವೆ! ಹಾಗಿರುವಾಗ ಆಕಾಶವನ್ನು ಭೂಮಿಯನ್ನು ಸತ್ಯಬದ್ಧವಾಗಿ ಸೃಷ್ಠಿಸಿದವನು ಮೊದಲ ದೇವರಾಗುತ್ತಾನೆ ಅಲ್ಲವೆ! ಎಂದು ಎಲ್ಲರೂ ಕೇಳಬಹುದು. ಹಾಗೆ ಆದರೇ ಈ ವಾಕ್ಯ ಮೊದಲ ದೇವರಿಗೆ ಸಂಬಂಧಿಸಿರುವುದೇ ಅಲ್ಲವೆ! ನೀವು ಎರಡನೆ ದೇವರನ್ನು ವಾಕ್ಯದಲ್ಲಿ ಹೇಳುತ್ತಿದ್ದೀರೆಂದು ಪ್ರಶ್ನಿಸಬಹುದು. ಅದಕ್ಕೆ ನನ್ನ ಉತ್ತರ ಏನೆಂದರೆ! ಮೊದಲು ಪ್ರಪಂಚವನ್ನು ಸೃಷ್ಠಿಸಿರುವುದು ತಾತನಾದ ಮೊದಲ ದೇವರೇ. ಸೃಷ್ಠಿ ನಂತರ ಪ್ರಪಂಚವನ್ನು, ಪ್ರಪಂಚದಲ್ಲಿನ ಜೀವರಾಶಿ ಗಳನ್ನು ನಡೆಸುತ್ತಿರುವುದು ತಂದೆಯಾದ ಎರಡನೆ ದೇವರೇ. ಇಲ್ಲಿ ಈ ವಾಕ್ಯದಲ್ಲಿ ಚೆನ್ನಾಗಿ ಗಮನಿಸಿದರೆ "ಆಕಾಶಗಳನ್ನು, ಭೂಮಿಯನ್ನು ಪರಮಾರ್ಥದಿಂದ ಸೃಷ್ಟಿಸಿದ್ದಾನೆ" ಎಂದು ಇದೆ. ಅಲ್ಲಾಹ್ ಆಕಾಶಗಳನ್ನು ಭೂಮಿಯನ್ನು **ಸತ್ಯಬದ್ಧವಾಗಿ** ಸೃಷ್ಟಿಸಿದ್ದಾನೆಂದು ಹೇಳುವುದೇ ಅಲ್ಲದೇ ಪರಮಾರ್ಥದಿಂದ ಸೃಷ್ಟಿಸಿದ್ದಾನೆಂದು ಹೇಳಿದ್ದಾನೆ. ಅಲ್ಲಿಗೆ ನಿಲ್ಲಿಸಿದೆ ತಿಳಿದರೇ ಇದರಲ್ಲಿ ದೊಡ್ಡ **ನಿದರ್ಶನ** ಇದೆಯೆಂದು ಕೂಡಾ ಹೇಳಿದ್ದಾನೆ. ಆದ್ದರಿಂದ ಈ ವಾಕ್ಯವನ್ನು ಕುರಿತು ಸ್ವಲ್ಪ ಆಳವಾಗಿ ಆಲೋಚನೆ ಮತ್ತು ಲೋಚನೆ ಕೂಡಾ ಮಾಡಬೇಕಾಗಿ ಬಂದಿದೆ. ಆ ವಿಧವಾಗಿ ಆಳವಾಗಿ ಹೋಗಿ ನೋಡಿದರೆ ಈ ವಾಕ್ಯ ತಂದೆಯಾದ ದೇವರನ್ನು ಕುರಿತು ಹೇಳಿರುವುದೇ ಹೊರತು, ತಾತನಾದ ದೇವರನ್ನು ಕುರಿತು ಹೇಳಲಿಲ್ಲವೆಂದು ತಿಳಿದುಹೋಗಿದೆ.

ಈ ವಾಕ್ಯದಲ್ಲಿ ಆಕಾಶಗಳನ್ನು, ಭೂಮಿಯನ್ನು ಎಂದು ಹೇಳಿದ್ದಾನಲ್ಲವೆ! ಎಂದು ಕೆಲವರು ಕೇಳಬಹುದು. ಆಕಾಶಗಳನ್ನು, ಭೂಮಿಯನ್ನು ಎಂದು ಹೇಳಿದ ಮಾತು ನಿಜವೇ! ಅದು ಸೃಷ್ಟಿ ಆದಿಯಲ್ಲಿ ಸೃಷ್ಠಿಸಿದ ಪ್ರಪಂಚವನ್ನಾದರೆ

'ಆಕಾಶ' ಎಂದು ಏಕವಚನವಾಗಿ ಹೇಳುತ್ತಿದ್ದನು. ಹಾಗೆ ಹೇಳದೆ ಬಹುವಚನದಲ್ಲಿ "ಆಕಾಶಗಳು ಭೂಮಿಯನ್ನು ಸತ್ಯಬದ್ಧವಾಗಿ ಅಥವಾ ಪರಮಾರ್ಥವಾಗಿ ಸೃಷ್ಟಿಸಿದ್ದಾನೆ" ಎಂದರೆ ಇದು ಹೊರಗಿನ ಆಕಾಶವಾಗಲಿ, ಹೊರಗಿನ ಭೂಮಿಯಾಗಲಿ ಅಲ್ಲವೆಂದು ತಿಳಿದುಹೋಗುತ್ತಿದೆ. ಇದರಲ್ಲಿ ನಿದರ್ಶನವಿದೆ ಎಂದು ಹೇಳುವುದರಿಂದ ನಮಗೆ ಹೊರಗೆ ಕಾಣಿಸುವ ಭೂಮಿಯಾಗಲಿ, ಆಕಾಶವಾಗಲಿ ಅಲ್ಲವೆಂದು ಅರ್ಥವಾಗುತ್ತಿದೆ. 'ದರ್ಶನ' ಎಂದರೇ ಕಾಣಿಸುವುದೆಂದು ಅರ್ಥ. 'ನಿ' ಎಂದರೆ ಅಲ್ಲ, ಇಲ್ಲ ಎಂದು ಅರ್ಥ. ನಿದರ್ಶನ ಎಂದರೇ ಕಾಣಿಸುವುದು ಅಲ್ಲವೆಂದು ವಾಕ್ಯದ ಕೊನೆಯಲ್ಲಿ ಹೇಳುವುದಾಗಿದೆ. ಇಷ್ಟು ಆಧಾರಗಳನ್ನು ವಾಕ್ಯದಲ್ಲಿ ತೋರಿಸಿದರೂ ಮನುಷ್ಯ ಹೊರಗಿನ ಆಕಾಶವನ್ನು, ಹೊರಗಿನ ಭೂಮಿಯನ್ನು ಕುರಿತು ಹೇಳಿದ್ದಾನೆಂದು ಅಂದುಕೊಂಡರೆ ಅವನು ಪೂರ್ತಿ ಅಜ್ಞಾನಿಯೇ ಎಂದು ಹೇಳಬಹುದು. ವಾಸ್ತವ ಜ್ಞಾನದ ಪ್ರಕಾರ ನೋಡಿದರೆ ಆಕಾಶಗಳು, ಭೂಮಿ ಎನ್ನುವ ಎರಡು ಮನುಷ್ಯನ ಶರೀರದಲ್ಲಿಯೇ ಗುಪ್ತವಾಗಿ ತಿಳಿಯದಂತೆ ಇವೆ. ಇನ್ನೊಂದು ಆಯತ್‌ನಲ್ಲಿ (ವಾಕ್ಯದಲ್ಲಿ) **"ಭೂಮಿ, ಆಕಾಶಗಳು ಮತ್ತು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ದೇವರು ಸೃಷ್ಟಿಸಿದ್ದಾನೆಂದು"** ಇದೆ. ಅಲ್ಲಿಯೂ ಕೂಡಾ ಆಕಾಶಗಳು ಎಂದು ಬಹುವಚನವಿದೆ. ದೊಡ್ಡ ನಿದರ್ಶನ ಇದೆಯೆಂದರೆ ಹೇಳಿದರೆ ಕಾಣಿಸದ ಭಾವನೆ ಇದೆಯೆಂದೇ ಅಲ್ಲವೆ, ಅರ್ಥ. ಆದ್ದರಿಂದ ಕಾಣಿಸದಂತೆ ಸೂಕ್ಷ್ಮವಾದ ಜ್ಞಾನ ಏನಿದೆಯೆಂದು ನೋಡಿದರೆ, ನಮಗೆ ಸ್ಪಷ್ಟವಾಗಿ ಕಣ್ಣಿಗೆ ನಿದರ್ಶನವಾಗಿ, ಬುದ್ಧಿಗೆ ದರ್ಶನವಾಗಿ ತಿಳಿಯುವುದು ಏನೆಂದರೆ! ಮನುಷ್ಯನ ಶರೀರದಲ್ಲಿನ ಕೆಳಗಿನ ಪಾದಗಳು ಭೂಮಿಯಾಗಿ, ಮೇಲೆ ತಲೆಯನ್ನು ಆಕಾಶಗಳಾಗಿ ತಿಳಿಯುತ್ತಿದೆ. ಶರೀರದ ಅಂತರ್ಭಾಗದಲ್ಲಿ ಬ್ರಹ್ಮನಾಡಿಯಲ್ಲಿರುವ ಏಳು ನಾಡಿ ಕೇಂದ್ರಗಳನ್ನು, ಏಳು ಆಕಾಶಗಳಾಗಿ ಹೇಳಬಹುದು. ತಲೆ ಏಳನೆ ಆಕಾಶವಾಗಿದೆ. ತಲೆಯಿಂದ ಪಾದಗಳವರೆಗು  ಏಳನೆ ಆಕಾಶದಿಂದ ಭೂಮಿವರೆಗು ಎಂದು ಅರ್ಥ ಮಾಡಿಕೊಳ್ಳಬೇಕು. ಮಾನವ ಶರೀರವನ್ನು ಆಕಾಶಗಳು, ಭೂಮಿ ಎಂದು ದೇವರು ಹೇಳಿದ್ದಾನೆ. ಮಾನವ ಶರೀರವನ್ನು ಈಗ ತಯಾರು

ಮಾಡುವವನು ತಂದೆಯಾದ ದೇವರೇ. ತಾತನಾದ ದೇವರು ಏನು ಮಾಡದೆ ಸಾಕ್ಷಿಯಾಗಿದ್ದಾನೆ. 29–44ನೇ ವಾಕ್ಯ ಕೂಡಾ ಹೊರಗಿನ ಸ್ಥೂಲ ಶರೀರಕ್ಕೆ ಹೇಳಿದ ವಿಷಯವಾದರೂ ಹೇಳುವುದರಲ್ಲಿ ಸೂಕ್ಷ್ಮಜ್ಞಾನದಿಂದ ಹೇಳಿದ್ದಾರೆ. ಆದ್ದರಿಂದ “ನಿದರ್ಶನ” ಎನ್ನುವ ಪದವನ್ನು ವಾಕ್ಯದಲ್ಲಿ ಹೇಳಿದ್ದಾರೆ. ನಿದರ್ಶನ ಎಂದರೆ ಹೊರಗೆ ಕಾಣಿಸುವುದು ಅಲ್ಲವೆಂದು ಮತ್ತೊಂದುಸಲ ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು ಈ ವಾಕ್ಯವನ್ನು ಎಷ್ಟು ವಿಧಗಳಲ್ಲಿ ನೋಡಿದರೂ ಮನುಷ್ಯನ ಶರೀರವನ್ನು ಸೃಷ್ಠಿಸುವುದು ಎಂದು ಇದೆ. ಮನುಷ್ಯನ ಶರೀರವನ್ನು ಸೃಷ್ಠಿಸುವವನು ಮನುಷ್ಯನಿಗೆ ಜನನ ಮರಣಗಳು ಉಂಟುಮಾಡುವವನು, ಎಲ್ಲ ಕಾರ್ಯಗಳು ಮಾಡುವವನು ತಂದೆಯಾದ ದೇವರೇಯೆಂದು ತಿಳಿಯಬೇಕು. ಈ ದಿನ ಹಿಂದೂಗಳು ಭಗವದ್ಗೀತೆಯನ್ನು, ಕ್ರೈಸ್ಥರು ಬೈಬಲ್ ಗ್ರಂಥವನ್ನು, ಮುಸ್ಲಿಮ್‌ರು ಖುರ್‌ಆನ್ ಗ್ರಂಥವನ್ನು ಓದುತ್ತಿದ್ದರೂ ಅದರಲ್ಲಿನ ಜ್ಞಾನವನ್ನು ಪೂರ್ತಿಯಾಗಿ ಗ್ರಹಿಸದಿದ್ದಾರೆ. ಯಾವ ವಾಕ್ಯ ತಂದೆಯಾದ ದೇವರದ್ದು, ಯಾವ ವಾಕ್ಯ ತಾತನಾದ ದೇವರದ್ದು ಎಂದು ತಿಳಿಯದಿದ್ದಾರೆ. ಎರಡನೆ ದೇವರಿಗೆ ಸಂಬಂಧಿಸಿದ ಆಯತ್‌ಗಳನ್ನು ಇಲ್ಲಿಯವರೆಗು ವಿವರಿಸಿ ಹೇಳಿಕೊಂಡಿದ್ದೇವೆ. ಈಗ ನಾಲ್ಕನೆ ಆಯತ್‌ನ್ನು ಕುರಿತು ಹೇಳಿಕೊಳ್ಳೋಣ. ಸೂರಾ ಎರಡು, ಆಯತ್ 255ರಲ್ಲಿ ಇರುವ ವಿಷಯವನ್ನು ನೋಡೋಣ.

(2-255) **“ದೇವರು ಮಾತ್ರವೇ ನಿಜವಾದ ಆರಾಧ್ಯ ದೈವ. ಆತನು ಹೊರತುಪಡಿಸಿ ಮತ್ತೊಬ್ಬ ಆರಾಧ್ಯನು ಇಲ್ಲವೇಯಿಲ್ಲ. ಆತನು ಸಜೀವನು, ಆತನು ಎಲ್ಲದಕ್ಕು ಮೂಲಾಧಾರನು. ಆತನಿಗೆ ತೂಗಡಿಕೆಯಾಗಲಿ, ನಿದ್ದೆಯಾಗಲಿ ಬರುವುದಿಲ್ಲ. ಭೂಮ್ಯಾಕಾಶಗಳಲ್ಲಿ ಇರುವುದು ಸಮಸ್ತವು ಆತನ ಅಧೀನದಲ್ಲಿದೆ. ಆತನ ಅನುಮತಿ ಇಲ್ಲದೇ ಆತನ ಸಮಕ್ಷಮದಲ್ಲಿ ಸಿಫಾರಸು ಮಾಡುವವನು ಯಾರೂ ಇಲ್ಲ. ಅವರಿಗೆ ಮುಂದೆ ಹಿಂದೆ ಇರುವ ಸಮಾಚಾರ ಒಟ್ಟಾರೆ ಆತನಿಗೆ ಗೊತ್ತು. ಆತನು ಕೋರಿರುವುದು ಹೊರತು ಆತನಿಗಿರುವ ಜ್ಞಾನದಲ್ಲಿನ ಯಾವ ವಿಷಯವೂ ಅವರ ಗ್ರಾಹಿತ ಪರಿಧಿಯೊಳಗೆ ಬರುವುದಿಲ್ಲ. ಆತನ ಕುರ್ಚಿ ವೈಶಾಲ್ಯ ಭೂಮಿ,**

**ಆಕಾಶಗಳನ್ನು ಸುತ್ತುವರೆದು ಇದೆ. ಭೂಮ್ಯಾಕಾಶಗಳನ್ನು ರಕ್ಷಿಸುವುದಕ್ಕೆ ಆತನು ಎಂದಿಗೂ ಧಣಿಯುವುದಿಲ್ಲ".**

ಈ ವಾಕ್ಯವನ್ನು ನೋಡಿದ ಕೂಡಲೇ ನಾನು ಹೇಳದೇ ನಿವೇ, ಹೇಳಿರುವುದು ಯಾವ ದೇವರಿಗಾಗಿರುವುದು ಎಂದು ತೀರ್ಮಾನಿಸಿ ಹೇಳಬಲ್ಲರು. ಇಲ್ಲಿ ಈ ವಾಕ್ಯದಲ್ಲಿ ಗಮನಿಸಿದರೆ ಮೊದಲೇ ದೇವರು ಒಬ್ಬನು ಮಾತ್ರವೇ ನಿಜವಾದ ಆರಾಧ್ಯ ದೈವವೆಂದು ಹೇಳಿದ್ದಾನೆ ಆದರೆ, ಯಾವ ದೇವರು ಆರಾಧ್ಯ ದೈವವಾಗಿ ಇದ್ದಾನೆಂದು ನಿರ್ಣಯಿಸಿ ಹೇಳದಿರುವುದರಿಂದ ದೇವರು ಒಬ್ಬನೇಯೆಂದು ಎಲ್ಲರೂ ಅಂದುಕೊಂಡಿದ್ದಾರೆ ಹೊರತು ಮನುಷ್ಯರೊಂದಿಗೆ ಸಂಬಂಧವಿಲ್ಲದೆ ಇನ್ನೊಬ್ಬ ದೇವರು ಸೃಷ್ಠಿ ಪೂರ್ವದಿಂದ ಇದ್ದಾನೆಂದು ಯಾರೂ ತಿಳಿಯದೆಹೋಗಿದ್ದಾರೆ. ದೇವರು ಒಬ್ಬನೇ ಮನುಷ್ಯರಿಗೆ ಆರಾಧ್ಯ ದೈವವೆಂದು ದೇವರೇ ಸ್ವತಃವಾಗಿ ಇನ್ನೊಬ್ಬ ದೇವರನ್ನು ಕುರಿತು ಹೇಳಿದ್ದಾನೆಂದು (3–18) ವಾಕ್ಯದಲ್ಲಿದ್ದರೂ ಅದನ್ನು ಗ್ರಹಿಸಲಾರದೆ ಹೋಗಿದ್ದಾರೆ. ಅವರ ಬುದ್ಧಿಗೆ ತಿಳಿದಿರುವುದು, ಇತರರು ಹೇಳಿದಾಗ ಕೇಳಿರುವುದೇ ಸತ್ಯವೆಂದು ನಂಬಿ ದೇವರು ಒಬ್ಬನೇ ಇದ್ದಾನೆಂಬುವ ನಂಬಿಕೆಯಿಂದ ಇದ್ದಾರೆ. ತಾತನಾದ ದೇವರು ಕೂಡಾ ತಂದೆಯಾದ ಒಬ್ಬ ದೇವರ ಮೇಲೆ ಭಕ್ತಿ ಹೊಂದಿರು ಎಂದು ವಾಕ್ಯದಲ್ಲಿ ಹೇಳಿದ್ದಾನೆ.

(2–255) ವಾಕ್ಯದಲ್ಲಿ ಕೆಲಸ ಮಾಡುತ್ತಿರುವ ದೇವರನ್ನೇ ಹೇಳಿದ್ದಾರೆ. ಕೊನೆಯಲ್ಲಿ ಭೂಮ್ಯಾಕಾಶಗಳನ್ನು ರಕ್ಷಿಸುವುದಕ್ಕೆ ಆತನು ಎಂದಿಗೂ ಧಣಿಯುವುದಿಲ್ಲ ಎಂದು ಇರುವುದರಿಂದ ಆತನು ಕೆಲಸ ಮಾಡುವ ದೇವರೆಂದು, ಕೆಲಸ ಮಾಡಿದರೂ ಆತನಿಗೆ ಧಣಿವು ಇಲ್ಲವೆಂದು ತಿಳಿಯುವುದರಿಂದ ಈ ವಾಕ್ಯ ಯಾರನ್ನು ಕುರಿತು ಹೇಳಿರುವುದು ಸುಲಭವಾಗಿ ತಿಳಿದುಹೋಗುತ್ತಿದೆ. ಆತನಿಗೆ ತೂಗಡಿಕೆಯಾಗಲಿ, ನಿದ್ರೆಯಾಗಲಿ ಬರುವುದಿಲ್ಲ ಎಂದಿದ್ದಾರೆ. ತಾತನಾದ ದೇವರನ್ನು ಕುರಿತು ದೈವ ಗ್ರಂಥದಲ್ಲಿ ಕೆಲವು ವಾಕ್ಯಗಳೇ ಹೇಳಿದ್ದಾರೆ. ಎಷ್ಟು ವಾಕ್ಯಗಳು ಹೇಳಿದರೂ ಆತನ ವಿಷಯ ಯಾರಿಗೂ ಏನು ಅರ್ಥವಾಗಲಿಲ್ಲ.

ಅರ್ಥ ಆಗಬೇಕಾದ ಅಗತ್ಯ ಕೂಡಾ ಇಲ್ಲ. ಆ ದೇವರಿಂದ ಉಪಯೋಗವಿಲ್ಲ, ಲಾಭವು ಇಲ್ಲ, ನಷ್ಟವು ಇಲ್ಲ, ಕೆಲಸ ಮಾಡದ ತಾತನಾದ ದೇವರು ಸ್ಥಬ್ದತೆಯಾಗಿ ಶರೀರದಲ್ಲಿದ್ದರೂ ಜೀವಿಯೊಂದಿಗೆ ಸಂಬಂಧವಿಲ್ಲ. ಜೀವಿಯೊಂದಿಗೆ ಸಂಬಂಧ ಇರುವವನು, ಜೀವಿಯು ನಿವಾಸಿಸುವ ಶರೀರವನ್ನು ಹಗಲಿರುಳು ಶ್ವಾಸವನ್ನು ಆಡಿಸುತ್ತಾ, ಶರೀರದಲ್ಲಿಯೇ ಕಾಣಿಸದ ಎಷ್ಟೋ ಕಾರ್ಯಗಳನ್ನು ಮಾಡುತ್ತಾ, ಶರೀರದಲ್ಲಿ ಜೀವಿಯ ಜೀವನ ಸಾಗುವಂತೆ ಮಾಡುತ್ತಿದ್ದಾನೆ. ಪ್ರತಿಕ್ಷಣ ಶರೀರದಲ್ಲಿ ಅಪ್ರಮತ್ತನಾಗಿ ಆತ್ಮನಾದ ದೇವರು ಕೆಲಸ ಮಾಡುವುದರಿಂದ ಶರೀರ ಆರೋಗ್ಯವಾಗಿದೆ. ಆದ್ದರಿಂದ ತಂದೆಯಾದ ದೇವರಿಗೆ ತೂಗಡಿಕೆಯಾಗಲಿ, ನಿದ್ರೆಯಾಗಲಿ ಇಲ್ಲವೆಂದು ವಾಕ್ಯದಲ್ಲಿ ಹೇಳಿದ್ದಾರೆ.

ಅಂತಿಮ ದೈವಗ್ರಂಥ ಖುರ್‌ಆನ್‌ನಲ್ಲಿ ತಾತನಾದ ದೇವರನ್ನು ಕುರಿತಾದ ನಾಲ್ಕು ವಾಕ್ಯಗಳನ್ನು 112ನೇ ಸೂರಾದಲ್ಲಿ ನೋಡಿದ್ದೇವೆ. ಹಾಗೆ ಅದೇ ಗ್ರಂಥದಲ್ಲಿ ತಂದೆಯಾದ ದೇವರನ್ನು ಕುರಿತು ಹೇಳಿದ ವಾಕ್ಯಗಳು ಅನೇಕವಿದ್ದರೂ ಕೇವಲ ನಾಲ್ಕು ವಾಕ್ಯಗಳನ್ನೇ ತೆಗೆದುಕೊಂಡಿದ್ದೇವೆ. ಅವು (3–18), (22–66), (29–44), (2–255) ವಾಕ್ಯಗಳನ್ನು ತೆಗೆದುಕೊಂಡು ವಿವರಿಸಿಕೊಂಡಿದ್ದೇವೆ. ಎಂಟು ವಾಕ್ಯಗಳಿಂದ **ಸೃಷ್ಠಿ ಪೂರ್ವದಲ್ಲಿ ದೇವರು ಮತ್ತು ಸೃಷ್ಠಿ ನಂತರ ದೇವರು** ಇರುವಂತೆ ತಿಳಿಯಲ್ಪಟ್ಟಿದೆ. ಒಂದು ಖುರ್‌ಆನ್ ಗ್ರಂಥದಲ್ಲಿಯೇ ಅಲ್ಲದೇ ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ಸೃಷ್ಠಿ ಪೂರ್ವದಲ್ಲಿರುವ ದೇವರನ್ನು, ಸೃಷ್ಠಿ ನಂತರದ ದೇವರನ್ನು ಕುರಿತು ಹೇಳಿದ್ದಾರೆ. ಭಗವದ್ಗೀತೆಯಲ್ಲಿ ಕೂಡಾ ನಾವು ಆರಾಧಿಸಬೇಕಾದ ದೇವರನ್ನು ಕುರಿತು, ಆರಾಧಿಸದೆ ತಿಳಿಯಬೇಕಾದ ದೇವರನ್ನು ಕುರಿತು ಹೇಳಿದ್ದಾರೆ. ಸೃಷ್ಠಿ ಪೂರ್ವದಲ್ಲಿರುವ ದೇವರನ್ನು ಕುರಿತು ನಾಲ್ಕು ಶ್ಲೋಕಗಳು, ಸೃಷ್ಠಿ ನಂತರದ ದೇವರನ್ನು ಕುರಿತು ಅನೇಕ ಶ್ಲೋಕಗಳಿದ್ದರೂ ಕೇವಲ ಮೂರು ಶ್ಲೋಕಗಳನ್ನು ತೆಗೆದುಕೊಂಡು ವಿವರಿಸಿಕೊಳ್ಳೋಣ

ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ ಹನ್ನೊಂದನೆಯ ಶ್ಲೋಕವನ್ನು ನೋಡೋಣ.

**ಶ್ಲೋ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ।**
**ಪರಂ ಭಾವ ಮಜಾನಂತೋ ಮಮಭೂತ ಮಹೇಶ್ವರಮ್ ॥**
**(ಪರಮಾತ್ಮ, ಸಾಕಾರ)**

**ಭಾವಾರ್ಥ :- "ಮನುಷ್ಯರಿಗೆ ದೇವರಾಗಿರುವ ನಾನು ನರ ಶರೀರವನ್ನು ಧರಿಸಿ ಮನುಷ್ಯರ ಮಧ್ಯದೊಳಗೆ ಬಂದರೇ ನನ್ನೊಂದರ ನಿಜಸ್ಥಿತಿಯನ್ನು ತಿಳಿಯದ ಮನುಷ್ಯರು ನನ್ನನ್ನು ಒಬ್ಬ ಮನುಷ್ಯನಾಗಿ ತಿಳಿದು ಎಲ್ಲರಂತೆ ನನ್ನನ್ನು ಅವಮಾನಿಸುತ್ತಿದ್ದಾರೆ"** ಎಂದು ಹೇಳಿದ್ದಾರೆ. ಈ ಶ್ಲೋಕದಲ್ಲಿ ಹೇಳಿರುವುದು ಎರಡನೆ ದೇವರನ್ನು ಅಲ್ಲ. ಮೊದಲ ದೇವರಾದ ಪರಮಾತ್ಮನನ್ನು ಕುರಿತು ಹೇಳಿದ್ದಾರೆ. ಸೃಷ್ಠಿ ನಂತರ ಎಲ್ಲಾ ಕಾರ್ಯಗಳನ್ನು ತಂದೆಯಾದ ದೇವರು ಮಾಡುತ್ತಿರುವಾಗ ತಾತನಾದ ದೇವರು ಮೌನವಾಗಿದ್ದು ಯಾವಾಗಾದರೆ ಭೂಮಿಮೇಲೆ ದೈವಜ್ಞಾನ ತಿಳಿಯದೆಹೋಗಿ, ಧರ್ಮಗಳಿಗೆ ಮುಪ್ಪು ಉಂಟಾಗುತ್ತದೊ ಆಗ ಮಾತ್ರ ಮನುಷ್ಯನಂತೆ ಭೂಮಿಮೇಲೆ ಉದ್ಭವಿಸಿ ತನ್ನ ಧರ್ಮಗಳನ್ನು ಪುನರುದ್ಧರಿಸಿ ಹೋಗುತ್ತಾನೆ. ಭೂಮಿಮೇಲೆ ಮನುಷ್ಯರಿಗೆ ದೇವರ ಧರ್ಮಗಳನ್ನು ತಿಳಿಸುವವರು ಯಾರೂ ಇಲ್ಲದಿರುವುದರಿಂದ, ದೇವರ ಧರ್ಮಗಳು ದೇವರಿಗೆ ಹೊರತು ಇತರರಿಗ್ಯಾರಿಗೂ ತಿಳಿಯದಿರುವುದರಿಂದ, ತಾತನಾದ ದೇವರೇ ಮನುಷ್ಯನಂತೆ ಬಂದು ಮನುಷ್ಯರಿಗೆ ತನ್ನ ಧರ್ಮಗಳನ್ನು ತಿಳಿಸಿಹೋಗಬೇಕಾದ ಅವಶ್ಯಕತೆಯಿದೆ.

**ಪ್ರಶ್ನೆ :- ನಿಮಗೆ ಇದಕ್ಕು ಮೊದಲೇ "ಸೃಷ್ಠಿಗಿಂತ ಮೊದಲಿದ್ದ ದೇವರು ಯಾವ ಕೆಲಸವನ್ನು ಮಾಡದವನಾಗಿ ಸೃಷ್ಠಿ ನಂತರ ಇದ್ದು ಹೋಗಿದ್ದಾನೆ" ಎಂದು ಹೇಳಿದ್ದಾರೆ. ಈಗಲೇನೊ ಅದೇ ದೇವರೇ ಮನುಷ್ಯನ ಆಕಾರದಲ್ಲಿ ಬಂದು ಮನುಷ್ಯರಿಗೆ ತನ್ನ ಜ್ಞಾನವನ್ನು ಬೋಧಿಸುತ್ತಾನೆಂದು ಹೇಳುತ್ತಿದ್ದೀರ . ಸೃಷ್ಠಿಗಿಂತ ಹಿಂದಿರುವ ದೇವರು ಸೃಷ್ಠಿ ನಂತರ ಪದವಿ ನಿವೃತ್ತಿಗೊಳಿಸಿದಂತೆ ತಾನು ಕೆಲಸವನ್ನು ಬಿಟ್ಟು ಯಾವ ಕೆಲಸಮಾಡದವನಾಗಿ ಇರುತ್ತೇನೆಂದು ನಿರ್ಣಯಿಸಿಕೊಂಡು ತನ್ನ ಕೆಲಸವನ್ನು, ಅಥವಾ ಪದವಿಯನ್ನು, ಅಥವಾ ಘನತೆಯನ್ನು ತನ್ನ ನಂತರವಿರುವ**

**ಕುಮಾರನಿಗೆ ಒಪ್ಪಿಸಿ, ತನ್ನಂತೆ ತನ್ನ ಕುಮಾರನಾದ ಆತ್ಮ ದೇವರಾಗಿ ಇದ್ದರೆ, ಪ್ರಜೆಗಳಿಗೆ ತಾನು ತಾತನಾಗಿದ್ದರೆ ತನ್ನ ಕುಮಾರನಾದ ಆತ್ಮ ತಂದೆಯಾಗಿದ್ದಾನೆ. ಪರಮಾತ್ಮನಾದ ತಾನು ಪ್ರಜೆಗಳೆಲ್ಲರಿಗೂ ತಾತನಾದರೆ, ತನ್ನ ಕುಮಾರನು ಪ್ರಜೆಗಳೆಲ್ಲರಿಗೂ ಒಂದುಕಡೆ ದೇವರಾಗಿದ್ದೂ, ಮತ್ತೊಂದುಕಡೆ ಪ್ರಜೆಗಳ ಕಾರ್ಯಕರ್ತನಾಗಿ ಇದ್ದಾನೆಂದು ಅರ್ಥವಾಗಿದೆ. ಪ್ರಜೆಗಳೆಲ್ಲರಿಗೂ ಆತ್ಮ ತಂದೆಯಾಗಿರುವಾಗ, ಪರಮಾತ್ಮ ತಾತನಾಗಿ ಇದ್ದಾನೆಂದು ನಿವೇ ಹೇಳಿದ್ದೀರ. ತಾತನಾಗಿರುವ ಪರಮಾತ್ಮನಾದ ದೇವರು ಯಾವ ಕೆಲಸವನ್ನು ಮಾಡದವನಾದಾಗ ಪುನಃ ಮನುಷ್ಯನಾಗಿ ಹುಟ್ಟಿ ತನ್ನ ಧರ್ಮಗಳನ್ನು ತಿಳಿಸುತ್ತಾನೆ ಎಂದು ನೀವು ಈಗ ಹೇಳುತ್ತೀದ್ದೀರ. ಹಾಗೆ ಮಾಡಿದರೆ ತಾತನಾದ ದೇವರು ಕೂಡಾ ಅಂದರೇ ಪರಮಾತ್ಮ ಕೂಡಾ ಕೆಲಸ ಮಾಡಿದಂತಾಗುತ್ತದೆ ಅಲ್ಲವೆ! ಹಾಗಿರುವಾಗ 'ಕೆಲಸ ಮಾಡದವನು' ಎಂದು ಪರಮಾತ್ಮನನ್ನು ಮೊದಲು ಏಕೆ ಹೇಳಿದ್ದೀರ? 'ಕ್ರಿಯಾ ರಹಿತನೆಂದು' ಹೇಳಿದ ನೀವೆ, ಅದೇ ದೇವರನ್ನೇ 'ಕ್ರಿಯಾಸಹಿತನೆಂದು', 'ಕೆಲಸ ಮಾಡುವವನೆಂದು' ಹೇಳುವುದು ತಪ್ಪಾಗುತ್ತದೆ ಅಲ್ಲವೆ! ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ತಾತನಾದ ದೇವರು 'ಕೆಲಸ ಮಾಡುವುದಿಲ್ಲ' ಎಂದು ಹೇಳಿದ ಮಾತಿಗೆ ಆಗಲೇ ಅಲ್ಲ ಈಗಲೂ ಕೂಡಾ ಕಟ್ಟುಬಿದ್ದಿದ್ದೇವೆ. ನಿಮಗೆ ನಾನು ಎರಡು ವಿಧಗಳಲ್ಲಿ ಮಾತನಾಡಿದಂತೆ, ಅಸತ್ಯವನ್ನು ಹೇಳಿದಂತೆ ಅರ್ಥವಾಗಿರುತ್ತದೆ. ಆದರೆ ನಾನು ಎಂದಿಗೂ ಅಸತ್ಯವನ್ನು ಮಾತನಾಡದೆ ಸತ್ಯವನ್ನೇ ಮಾತನಾಡಿದಂತೆ ಮತ್ತೊಂದುಸಲ ಹೇಳುತ್ತಿದ್ದೇನೆ. ಶರೀರದಲ್ಲಿ ಕಾರ್ಯಕರ್ತನಾದ ಆತ್ಮನಾದ ದೇವರಿಗೆ ಒಂದು ಕ್ಷಣ ಕೂಡಾ ಬಿಡುವಿಲ್ಲದಂತೆ ಕೆಲಸವಿದೆ. ಅಷ್ಟೇ ಅಲ್ಲದೆ ಆತನು ಪ್ರತಿ ಮನುಷ್ಯನ ಕರ್ಮಪ್ರಕಾರ ಅವನನ್ನು ನಡೆಸುತ್ತಿದ್ದಾನೆ. ಪರಮಾತ್ಮನಾದ ದೇವರು ತನ್ನ ಕುಮಾರನಾದ ಆತ್ಮ ಶರೀರಗಳಲ್ಲಿ ಕೆಲಸಮಾಡುತ್ತಿರುವುದು ನೋಡುತ್ತಲೇ ಇದ್ದೇವೆ. ಆತ್ಮ ಜೀವಾತ್ಮವನ್ನು ಕರ್ಮಪ್ರಕಾರ ನಡೆಸಬೇಕೆನ್ನುವ ನಿಯಮದ ಪ್ರಕಾರ ನಡೆಸುವುದರಲ್ಲಿ ಅಜ್ಞಾನದ

ಪ್ರಕಾರ ಮನುಷ್ಯನನ್ನು ಅಜ್ಞಾನದಲ್ಲಿಯೇ ನಡೆಸಬೇಕಾಗಿದೆ. ಮನುಷ್ಯ ಶ್ರದ್ಧೆಯನ್ನನುಸರಿಸಿ ಅವನು ಮಾಡಿಕೊಂಡ ಕರ್ಮವನ್ನು ಅನುಸರಿಸಿ ಮನುಷ್ಯ ಅಜ್ಞಾನಮಾರ್ಗದಲ್ಲಿ, ಅಜ್ಞಾನ ಕೆಲಸಗಳಲ್ಲೇ, ಅಜ್ಞಾನಿಯಾಗಿ ನಡೆಯುತ್ತಿರುತ್ತಾನೆ. ಹಾಗೆ ಆತ್ಮವೇ ಅವನನ್ನು ನಡೆಸುತ್ತಿದೆ. ಯಾವಾಗಾದರೂ, ಯಾವ ಸಂದರ್ಭದಲ್ಲೇ ಆದರೂ ಆತ್ಮ ಸ್ವತಃವಾಗಿ ನಡೆಸದೆ ಅವನ ಶ್ರದ್ಧೆಯನ್ನನುಸರಿಸಿ ಕರ್ಮವನ್ನನುಸರಿಸಿ ಅವನನ್ನು ಯಾವ ಮಾರ್ಗದಲ್ಲಿ ನಡೆಸಬೇಕೊ ಆ ಮಾರ್ಗದಲ್ಲಿಯೇ ನಡೆಸುತ್ತಾ, ಕಷ್ಟಸುಖಗಳನ್ನು ಹೊಂದುವಂತೆ ಮಾಡುತ್ತಿದೆ. ಈ ವಿಧವಾಗಿ ಮನುಷ್ಯನ ಭಾವವನ್ನನುಸರಿಸಿ, ಅವನ ಕರ್ಮವನ್ನನುಸರಿಸಿ ಹೆಚ್ಚಾಗಿ ಅಜ್ಞಾನದಲ್ಲಿಯೇ ಆತ್ಮನಾದ ದೇವರು ಅಥವಾ ತಂದೆಯಾದ ದೇವರು ನಡೆಸುವುದು ನಡೆಯುತ್ತಿದೆ. ಮನುಷ್ಯ ಜೀವಿಸುವುದರಲ್ಲಿ ತಂದೆಯಾದ ದೇವರ ಪ್ರಮೇಯ ಹೊರತು, ತಾತನಾದ ಪರಮಾತ್ಮ ಪ್ರಮೇಯ ಏನುಯಿಲ್ಲ. ಆತ್ಮ ಮನುಷ್ಯನ ಕರ್ಮವನ್ನು ಬುದ್ಧಿಯ ಇಷ್ಟತೆಯನ್ನು (ಶ್ರದ್ಧೆಯನ್ನು) ಅನುಸರಿಸಿ ನಡೆಸುವುದರಿಂದ ಆತ್ಮನಾದ ದೇವರೇ ಸ್ವತಃವಾಗಿ ಮನುಷ್ಯನನ್ನು ಅಜ್ಞಾನದ ಕಡೆ ನಡೆಸಬೇಕಾಗಿ ಬರುತ್ತಿದೆ. ಹಾಗೆ ನಡೆಸುವುದರಿಂದ ಸ್ವಲ್ಪ ಕಾಲಕ್ಕೆ ಮನುಷ್ಯನಿಗೆ ದೇವರ ಜ್ಞಾನ ಸ್ವಲ್ಪವಾದರೂ ತಿಳಿಯದಂತೆ ಹೋಗುತ್ತಿದೆ. ಹಾಗೆ ಜ್ಞಾನ ತಿಳಿಯದೆ ಹೋಗುವುದರಿಂದ ಭೂಮಿಮೇಲೆ ದೇವರ ಧರ್ಮಗಳು ನೆಲಸಮಾಧಿ ಯಾಗಿ ಹೋಗುತ್ತವೆ. ಯಾವಾಗಾದರೆ ದೇವರ ಧರ್ಮಗಳು ತಿಳಿಯದೆ ಹೋಗಿವೆಯೋ ಆಗ ಅವುಗಳನ್ನು ತಿಳಿಸುವವನು ಯಾರೂ ಇಲ್ಲದಂತೆ ಹೋಗುತ್ತಿದ್ದಾನೆ. ದೇವರಾಗಿರುವ ಆತ್ಮ ಮಾನವರ ಜೀವನ ಪಾಲನೆಯಲ್ಲಿಯೇ ಲಗ್ನವಾಗಿ ಒಂದು ಕ್ಷಣ ಕೂಡಾ ಬಿಡುವಿಲ್ಲದೆ ಇದೆ. ಅಷ್ಟೇಅಲ್ಲದೆ ಮನುಷ್ಯನನ್ನು ಅಜ್ಞಾನದ ಕಡೆ ನಡೆಸುವ ಆತ್ಮವೇ ದೈವ ಧರ್ಮಗಳಿಗೆ ವಿರುದ್ಧವಾಗಿ ಮನುಷ್ಯರನ್ನು ನಡೆಸುತ್ತಿದೆ, ಹಾಗೆ ತಯಾರಾದ ಮನುಷ್ಯ ಜನ್ಮ ಜನ್ಮಕ್ಕು ಪೂರ್ತಿ ಅಧೋಗತಿಗೆ ಹೋಗುವುದರಿಂದ ಕಾಲ ಕಳೆದಂತೆಲ್ಲ ಅಧರ್ಮ ಪ್ರಭಾವ ಹೆಚ್ಚಾಗುತ್ತಿರುತ್ತದೆ. ಹಾಗೆ ಧರ್ಮಗಳು ಯಾವೆಂದು ತಿಳಿಯದ ಮನುಷ್ಯ ಧರ್ಮಗಳು ಪೂರ್ತಿಯಾಗಿ ಮರೆತುಹೋಗುತ್ತಾನೆ. ಅದರಿಂದ ಅಧರ್ಮ ಆಚರಣೆ ಹೆಚ್ಚಾಗುತ್ತದೆ, ಧರ್ಮಾಚರಣೆ ಸ್ವಲ್ಪವಾದರೂ ಇಲ್ಲದಂತೆ ಹೋಗುತ್ತದೆ.

ಅಂತಹ ಸ್ಥಿತಿಯಲ್ಲಿ ಆತ್ಮ ಧರ್ಮಗಳನ್ನು ತಿಳಿಸುವುದಿಲ್ಲ. ಆಗ ಅಲ್ಲಿಯವರೆಗು ಕೆಲಸವಿಲ್ಲದ ಪರಮಾತ್ಮವೇ ತನ್ನ ಧರ್ಮಗಳನ್ನು ಕುರಿತು ಮನುಷ್ಯರಿಗೆ ತಿಳಿಸಬೇಕಾದ ಅಗತ್ಯವಿದೆ. ಆ ಕೆಲಸಕ್ಕಾಗಿಯೇ ದೇವರು ಪಕ್ಕದಲ್ಲಿ ಇದ್ದಾನೆಂದು ಇಲ್ಲದಿದ್ದರೆ ಪರಮಾತ್ಮನಾದ ದೇವರು ಇರಬೇಕಾದ ಕೆಲಸವಿಲ್ಲ ವೆಂದು, ಮನುಷ್ಯರಿಗೆ ಕೂಡಾ ದೇವರೊಂದಿಗೆ ಅವಶ್ಯವೇ ಇಲ್ಲವೆಂದು ಹೇಳಬಹುದು. ಆದರೇ ತಾತನಾದ ಪರಮಾತ್ಮ ದೇವರು ಕೆಲಸವನ್ನು ಮಾಡದವನಾಗಿದ್ದಾನೆ, ಆದ್ದರಿಂದ ದೇವರು ಮಾಡಿದಂತೆ ಯಾರಿಗೂ ತಿಳಿದಂತೆ ದೇವರೇ ತನ್ನ ಜ್ಞಾನವನ್ನು, ತನ್ನ ಧರ್ಮಗಳನ್ನು ಭೂಮಿಮೇಲೆ ಮನುಷ್ಯರಿಗೆ ಹೇಳಬೇಕಾಗಿದೆ. ದೇವರ ಧರ್ಮಗಳನ್ನು ದೇವರು ಹೊರತು ಇತರರು ಯಾರೂ ತಿಳಿದಿಲ್ಲ. ಆದ್ದರಿಂದ ಇತರರು ಅಲ್ಲದೆ ದೇವರೇ ಹೇಳಬೇಕಾಗಿದೆ. ದೇವರು ಯಾವ ಕೆಲಸವನ್ನು ಮಾಡುವುದಿಲ್ಲ, ಯಾರೊಂದಿಗೂ ಮಾತನಾಡುವುದಿಲ್ಲ ಎಂದು ಮೊದಲೇ ಹೇಳಿಕೊಂಡಿದ್ದೇವೆ. ಹಾಗಿರುವಾಗ ಹೇಗೆ ತಿಳಿಸುತ್ತಾನೆನ್ನುವುದು ಪ್ರಶ್ನೆಯಾಗಿ ಉಳಿದುಹೋಗಿದೆ. ಇಂತಹ ಸಮಸ್ಯೆಯನ್ನು ಅತಿಕ್ರಮಿಸಲು ದೇವರು ಮೊದಲೇ ಒಂದು ಯೋಜನೆಯನ್ನು ತಯಾರು ಮಾಡಿಟ್ಟಿದ್ದಾನೆ. ಆ ಯೋಜನೆ (ಪಥಕ) ಏನೆಂದರೆ! ತಾನು ಹೇಳಿದಂತೆ ಯಾರಿಗೂ ತಿಳಿಯದಹಾಗೆ ತಾನೇ ಮಾರುವೇಷದಲ್ಲಿ ಬಂದು ತನ್ನ ವಿಷಯಗಳನ್ನು ಹೇಳಿಹೋಗುವುದೆ ಮಾರ್ಗವಾಗಿ ಇಟ್ಟುಕೊಂಡಿದ್ದಾನೆ. ಆ ಮಾರ್ಗವನ್ನು ಅವಲಂಭಿಸಿದಾಗ ತಾನು ಮನುಷ್ಯರಲ್ಲಿ ಬೆರೆತುಹೋಗುವಂತೆ ಮನುಷ್ಯನಾಗಿ ಮಾರುವೇಷದಲ್ಲಿ ಬಂದರೆ ತನಗೆ ಹೊರತುಪಡಿಸಿ ಯಾರಿಗೂ ತಿಳಿಯದ ಧರ್ಮಗಳನ್ನು ತಾನೇ ಸ್ವತಃವಾಗಿ ಹೇಳಬಹುದು. ಹಾಗೆ ಮಾರುವೇಷದಲ್ಲಿ ಹೇಳುವುದರಿಂದ ತಾನು ಹೇಳಿದಂತೆ ಯಾರಿಗೂ ತಿಳಿದಿಲ್ಲ. ಯಾರಿಗೂ ತಿಳಿಯದಿರುವಾಗ ತಾನು ಮಾತನಾಡಿ ದಂತಿರುತ್ತದೆ.

**ಪ್ರಶ್ನೆ :– ಸಾಕ್ಷಿಯಾಗಿ ಶರೀರದಲ್ಲಿ ಸ್ಥಬ್ಧತೆಯಾಗಿರುವ ದೇವರು ಮನುಷ್ಯನ ಅವತಾರದಲ್ಲಿ ಭಗವಂತನಾಗಿ ಬಂದರೆ ಆಗ ಪರಮಾತ್ಮನಾದ ದೇವರು ಶರೀರದಲ್ಲಿ**

**ಸಾಕ್ಷಿಯಾಗಿ ಇಲ್ಲದಂತೆ ಅಲ್ಲವೆ! ಆಗ ಶರೀರದಲ್ಲಿ ಒಟ್ಟು ಮೂರು ಆತ್ಮಗಳಲ್ಲದೆ ಜೀವಾತ್ಮ, ಆತ್ಮ ಎರಡು ಆತ್ಮಗಳೇ ಇರುತ್ತವೆ ಅಲ್ಲವೆ! ಪರಮಾತ್ಮ ಇರುವುದಿಲ್ಲ ಅಲ್ಲವೆ! ಹಾಗಿರುವಾಗ ಪ್ರತಿ ಶರೀರದಲ್ಲಿಯೂ ಎಂದಿಗೂ ಎಲ್ಲವೇಳೆಯಲ್ಲಿ ಮೂರು ಆತ್ಮಗಳಿರುತ್ತವೆಯೆಂದು ಹೇಳಿದ ನಿಮ್ಮ ಮಾತು ಅಸತ್ಯವಾಗುತ್ತದೆ ಅಲ್ಲವೆ! ಎಂದು ಕೇಳುತ್ತಿದ್ದೇವೆ. ಇದಕ್ಕೆ ನೀವೇನೇಳುತ್ತೀರಾ?**

**ಉತ್ತರ :–** ನೀವು ಸಂದರ್ಭಾನುಸಾರ ಕೇಳಬೇಕಾದ ಪ್ರಶ್ನೆಯನ್ನೇ ಕೇಳಿದ್ದೀರ. ಅದಕ್ಕೆ ನಾನೇನು ಹೇಳುತ್ತಿದ್ದೇನೆಂದರೆ, ದೇವರು ಕಳ್ಳನಂತೆ ಭಗವಂತನಾಗಿ ಶರೀರವನ್ನು ಧರಿಸಿ ಬಂದಿದ್ದಾನೆ. ಒಂದು ಶರೀವನ್ನು ಧರಿಸಿ ಬರುವುದಕ್ಕೆ ದೇವರೊಂದರ ಕೋಟ್ಯಾದಿ ಅಂಶಗಳಲ್ಲಿ ಒಂದು ಅಂಶದಿಂದಲೇ ದೇವರು ಮನುಷ್ಯನ ಶರೀರವನ್ನು ಧರಿಸಿ ಬರುತ್ತಾನೆ. ದೇವರು ಮನುಷ್ಯನ ಶರೀರವನ್ನು ಧರಿಸಿ ಮನುಷ್ಯನಂತೆ ಕೆಲಸಗಳು ಮಾಡುತ್ತಿರುವುದರಿಂದ ಆತನನ್ನು ಭಗವಂತನಾಗಿ ಗುರುತು ಹಿಡಿಯುವುದಕ್ಕೆ ಸಾಧ್ಯವಾಗುವುದಿಲ್ಲ. ದೇವರು ಮನುಷ್ಯನಂತೆ ಬಂದಾಗ ಆ ಮನುಷ್ಯನನ್ನು 'ಭಗವಂತ' ಎಂದು ಹೇಳಬಹುದು. ಭಗವಂತನು 25 ಭಾಗಗಳಿರುವ ಶರೀರದೊಂದಿಗೆ ಇರುವವನಾದ್ದರಿಂದ, ಆತನನ್ನು ದೇವರು ಎನ್ನುವುದಕ್ಕೆ  ಸಾಧ್ಯವಿಲ್ಲ. ದೇವರ ಕೋಟ್ಯಾದಿ ಅಂಶಗಳಲ್ಲಿ ಒಂದೇ ಅಂಶದಿಂದ ಬಂದ ಭಗವಂತನು ದೇವರು ಅಲ್ಲವೆಂದು, ಅನೇಕ ಅಂಶಗಳಿರುವ ಪರಮಾತ್ಮ ಒಂದೇ ಅಂಶವಿರುವ ಭಗವಂತನು ಅಲ್ಲವೆಂದು ಹೇಳಬಹುದು. ಆದ್ದರಿಂದ ಪರಮಾತ್ಮ ಪರಮಾತ್ಮನಾಗಿಯೇ ಇರುತ್ತಾ ಭಗವಂತನಾಗಿ ಭೂಮಿಮೇಲಕ್ಕೆ ಬಂದು ಮಾತನಾಡಿ ತನ್ನ ಧರ್ಮಗಳನ್ನು ತಿಳಿಸುತ್ತಿದ್ದಾನೆ. ಹಾಗೆ ಮಾಡುವುದರಿಂದ ಪರಮಾತ್ಮ ಶರೀರದಲ್ಲಿಯೇ ಇದ್ದಾನೆಂದು ಹೇಳಬಹುದು. ಸಮುದ್ರ ಸಮುದ್ರ ಸ್ಥಾನದಲ್ಲಿಯೇ ಇರುತ್ತದೆ. ಆದರೇ ಸಮುದ್ರದಿಂದ ನೀರಿನ ಹನಿ ಗಾಳಿಗೆ ನೀರಿನ ತುಂತುರು ಹನಿಯಾಗಿ ಬಂದು ಹೊರಬಿದ್ದಿದೆ ಎಂದುಕೊಳ್ಳೋಣ. ಆಗ ಆ ನೀರಿನ ಹನಿಯನ್ನು ಸಮುದ್ರ ಎಂದು ಹೇಳುವುದಿಲ್ಲ. ನೀರಿನ ಹನಿಯೇ ಎಂದು ಪ್ರತ್ಯೇಕವಾದ ಹೆಸರಿನಿಂದ ಕರೆಯುತ್ತೇವೆ. ಆದರೇ ಆ ಹನಿ ಮೊದಲ ಸಮುದ್ರದಲ್ಲಿನದೆ

ನಂತರ ಹೊರಗೆ ಬಂದು ನೀರಿನ ಹನಿಯಾಗಿ ಕರೆಯಲ್ಪಡುತ್ತಿದೆ. ಆ ನೀರಿನ ಹನಿ ಯಾವುದೊ ಒಂದು ವಿಧವಾಗಿ ಸಮುದ್ರದಲ್ಲಿ ಬೆರೆತುಹೋದರೆ ಆಗ ಅದು ಸಮುದ್ರವಾಗಿಯೇ ಕರೆಯಲ್ಪಡುತ್ತದೆ. ಸಮುದ್ರದಲ್ಲಿ ಇರುವುದು ನೀರೆ, ನೀರಿನ ಹನಿಯಲ್ಲಿರುವುದು ನೀರೆ ಆದರೇ ಅದರಿಂದ ಅವುಗಳನ್ನು ಬೇರೆಬೇರೆಯಾಗಿ ಇರುವಾಗ ಕೂಡಾ ಎರಡನ್ನು ನೀರೇಯೆಂದು ಹೇಳಬಹುದು. ನೀರಿನ ಹನಿಗು ಸಮುದ್ರದಲ್ಲಿನ ನೀರಿಗು ಒಂದೇ ಧರ್ಮವಿದೆಯೆಂದು ಹೇಳಬಹುದು. ಅದೇ ವಿಧವಾಗಿ ತಾತನಾದ ದೇವರಿಗು ಆತನಿಂದಲೇ ಹೊರಗೆ ಮಾರುವೇಷದಲ್ಲಿ ಮನುಷ್ಯನ ಶರೀರವನ್ನು ಧರಿಸಿ ಬಂದಿರುವ ಭಗವಂತನಿಗೆ ಯಾವ ವ್ಯತ್ಯಾಸ ಇಲ್ಲವೆಂದು, ಇಬ್ಬರೂ ಒಬ್ಬರೇಯೆಂದು ಹೇಳಬಹುದು. ನೀರು ಒಂದೇ ಆದರೂ ಸಮುದ್ರ ಬೇರೆ, ನೀರಿನ ಹನಿ ಬೇರೆ ಎನ್ನುವಂತೆ ಪರಮಾತ್ಮ ಭಗವಂತನು ಬೇರೆಬೇರೆಯಾಗಿ ಇದ್ದರೂ, ಇಬ್ಬರು ಒಬ್ಬರೇಯೆಂದು ತಿಳಿಯಬೇಕು. ಸಮುದ್ರದ ನೀರಿನ ಹನಿಯನ್ನು ಉದಾಹರಣೆಯಾಗಿ ತೆಗೆದುಕೊಂಡಂತೆ ಪರಮಾತ್ಮನನ್ನು ಭಗವಂತನನ್ನು ಬೇರೆಬೇರೆಯಾಗಿ ಹೇಳಬಹುದು. ನೀರಿನ ಹನಿ ಬೇರೆಯಾಗಿರುವಾಗ ಕೂಡಾ ಸಮುದ್ರ ಇರುವ ಸ್ಥಾನದಲ್ಲಿ ಇದ್ದಂತೆ ಪರಮಾತ್ಮ (ದೇವರ) ನಿಂದ ಭಗವಂತನು ಹೊರಗೆ ಬಂದಿರುವಾಗ ಕೂಡಾ ಪರಮಾತ್ಮ ತನ್ನ ಸ್ಥಾನದಲ್ಲಿಯೇ ಇದ್ದಾನೆ. ಆದ್ದರಿಂದ ಧರ್ಮ ಸಂಸ್ಥಾಪನೆ ಸಲುವಾಗಿ ಪರಮಾತ್ಮ ಭಗವಂತನಾಗಿ ಬಂದರೂ ಆತನು ಪರಮಾತನಾಗಿಯೇ ಶರೀರದಲ್ಲಿ ಸಾಕ್ಷಿಯಾಗಿರುತ್ತಾನೆ. ಆಗ ಮನುಷ್ಯರು ಆತನನ್ನು ಗುರುತಿಸಲ್ಪಟ್ಟರೆ ದೊಡ್ಡ ಅದೃಷ್ಟವಂತರೇ ಎಂದು ಹೇಳಬಹುದು. ಏಕೆಂದರೆ! ತಾತನಾದ ದೇವರು ಭಗವಂತನಾಗಿ ಬಂದಾಗ ಆತನನ್ನು ಮನುಷ್ಯರು ಕಂಡುಕೊಳ್ಳುವುದು ದುರ್ಲಭ. ಅಷ್ಟು ಕಷ್ಟವಾದ ಕೆಲಸವನ್ನು, ಯಾರಿಗೂ ಸಾಧ್ಯವಾಗದ ಭಗವಂತನನ್ನು ಗುರುತಿಸುವುದು ನಡೆದರೆ ಆ ಜನ್ಮದಲ್ಲಿಯೇ ಅವನಿಗಿರುವ ಕರ್ಮವೆಲ್ಲವೂ ಸುಟ್ಟುಹೋಗಿ ಸುಲಭವಾಗಿ ಮೋಕ್ಷ ಲಭಿಸುತ್ತದೆ. ಈ ವಿಷಯವನ್ನು ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಒಂಭತ್ತನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾರೆ ನೋಡಿರಿ.

**ಶ್ಲೋ ೯. ಜನ್ಮಕರ್ಮಚಮೇ ದಿವ್ಯಮೇವಂ ಯೊ ವೇತ್ತಿ ತತ್ತ್ವತಃ।**

**ತ್ಯಕ್ತ್ವಾ ದೇಹಂ ಪುನರ್ಜನ್ಮನೈತಿ ಮಾಮೇತಿ ಸೋಽರ್ಜುನ! ॥**

**(ಸಾಕಾರ, ನಿರಾಕಾರ)**

**ಭಾವಾರ್ಥ:– "ನಾನು ಮನುಷ್ಯನ ಅವತಾರದಲ್ಲಿ ಭೂಮಿಮೇಲಕ್ಕೆ ಬಂದಾಗ ನನ್ನ ದಿವ್ಯವಾದ ಕೆಲಸಗಳನ್ನು ತಿಳಿದು, ನಾನು ಭಗವಂತನಾಗಿ ಬಂದಿದ್ದೇನೆಂದು ಗ್ರಹಿಸಿದವನು ಮರಣಿಸಿದ ನಂತರ ಬೇರೆ ಜನ್ಮಕ್ಕೆ ಹೋಗುವುದಿಲ್ಲ. ಅವನು ನೇರವಾಗಿ ನನ್ನೊಳಗೆ ಐಕ್ಯವಾಗುತ್ತಾನೆ".**

ಈ ವಿಧವಾಗಿ ದೇವರೇ ಭಗವಂತನಾಗಿ ಇರುವಾಗ ಸ್ವತಃವಾಗಿ ಹೇಳಿದ್ದಾನೆ. ಇಲ್ಲಿಯೇ ಅಲ್ಲದೆ ಉಳಿದ ಎರಡು ದೈವಗ್ರಂಥಗಳಲ್ಲಿ ಕೂಡಾ ಸೂಚನೆ ಪ್ರಾಯವಾಗಿ ಈ ವಿಷಯವನ್ನು ಹೇಳಿದ್ದಾನೆ. ಈ ಶ್ಲೋಕವನ್ನು ಚೆನ್ನಾಗಿ ಗಮನಿಸಿದರೆ, ಕಾಣಿಸುವ ಭಗವಂತನಾಗಿ ಬಂದವನು ತಾತನಾದ ದೇವರೆಯೆಂದು ತಿಳಿದಾಗ ತಪ್ಪದೇ ಆತನನ್ನು ನಮಸ್ಕರಿಸುತ್ತಾರೆ. ತಿಳಿದರೆ ಮೋಕ್ಷ ಲಭಿಸುತ್ತದೆಯೆಂದು ಮೇಲಿನ ಶ್ಲೋಕದಲ್ಲಿ ಹೇಳಿದ್ದಾರೆ. ಇಲ್ಲಿ ಹೇಳಿರುವುದನ್ನು ಅನುಸರಿಸಿ ಸೃಷ್ಠಿ ಪೂರ್ವದಲ್ಲಿರುವ ದೇವರು ಸ್ವತಃ ಭೂಮಿಮೇಲೆ ಅವತರಿಸಿ ತನ್ನ ಜ್ಞಾನವನ್ನು ಹೇಳಿಹೋಗುತ್ತಿದ್ದಾನೆಂದು ಅರ್ಥವಾಗುತ್ತಿದೆ. ಆತನು ಹಾಗೆ ಸ್ವತಃವಾಗಿ ಜ್ಞಾನವನ್ನು ಹೇಳಿಹೋದರೂ ಆತನು ಭಗವಂತನಾಗಿಯೇ ತಿಳಿಯಲ್ಪಡುತ್ತಿದ್ದಾನೆ. ಆದ್ದರಿಂದ ದೇವರು ಬಂದು ಬೋಧಿಸುವ ಕೆಲಸವನ್ನು ಮಾಡಿದ್ದಾನೆಂದು ಹೇಳುವುದಕ್ಕೆ ಆಧಾರ ಇಲ್ಲ. ಆಧಾರವನ್ನು ಯಾರಿಗೂ ತೋರಿಸಲಾರೆವು. ಒಂದುವೇಳೆ ಬಂದವನು ತಾತನಾದ ದೇವರೇಯೆಂದು ತಿಳಿದರೂ ಇತರರಿಗೆ ಹೇಳಿ ನಂಬಿಸಲಾರೆವು. ಈ ಶ್ಲೋಕ ತಾತನಾದ ಪರಮಾತ್ಮನನ್ನು ಕುರಿತು ಹೇಳಿರುವುದು. ತಂದೆಯಾದ ದೇವರನ್ನು ಕುರಿತು ಹೇಳಿರುವುದು ಅಲ್ಲ. ಈ ವಿಧವಾಗಿ ತಾತನಾದ ಪರಮಾತ್ಮನನ್ನು ಕುರಿತು ಹೇಳಿದ ಶ್ಲೋಕಗಳು ಕೆಲವು ಮಾತ್ರವೇ ಇವೆ. ಈಗ ನಾವು ನಾಲ್ಕು ಶ್ಲೋಕಗಳನ್ನು ಹೇಳಬೇಕೆಂದುಕೊಂಡಿದ್ದೇವೆ. ಅದರಲ್ಲಿ ಒಂದು ಶ್ಲೋಕವನ್ನು

ಕುರಿತು ಹೇಳಿದ್ದೇನೆ. ಈಗ ಭಗವದ್ಗೀತೆ ಜ್ಞಾನಯೋಗದಲ್ಲಿನ 7, 8ನೇ ಶ್ಲೋಕಗಳನ್ನು ಹೇಳಿಕೊಳ್ಳೋಣ.

**ಶ್ಲೋ॥ 7.** **ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ !**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥**

**ಭಾವಾರ್ಥ :– "ಯಾವಾಗ ಭೂಮಿಮೇಲೆ ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ವೃದ್ಧಿಯಾಗುತ್ತಿವೆಯೋ ಆಗ ನಾನು ಅವತರಿಸುತ್ತಿದ್ದೇನೆ."**

**ಶ್ಲೋ॥ 8.** **ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್।**
**ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥**

**ಭಾವಾರ್ಥ :– "ಸಾಧುಜನರನ್ನು ಅಭಿವೃದ್ಧಿ ಮಾಡುವುದಕ್ಕೆ ದುಷ್ಟಜನರನ್ನು ಅಂದರೇ ಅಜ್ಞಾನಿಗಳನ್ನು ಇಲ್ಲದಂತೆ ಮಾಡುವುದಕ್ಕೆ, ಕೆಟ್ಟವರನ್ನು ಮಾರ್ಪಡಿಸಿ ಒಳ್ಳೆಯವರನ್ನಾಗಿ ಮಾಡುವುದಕ್ಕೆ ಧರ್ಮಸಂಸ್ಥಾಪನೆ ಮಾಡುವುದಕ್ಕೆ ಯುಗಯುಗದಲ್ಲಿಯೂ ನಾನು ಬರಬೇಕಾಗಿದೆ."**

ಈ ವಿಧವಾಗಿ ತಾತನಾದ ಪರಮಾತ್ಮಯೆನ್ನುವ ದೇವರು ತಾನು ಹೇಳಿದ ತೌರಾತ್ ಗ್ರಂಥದಲ್ಲಿ (ಭಗವದ್ಗೀತೆ ಗ್ರಂಥದಲ್ಲಿ) ಬೋಧಿಸಿದ್ದಾನೆ. ಈ ವಿಧವಾಗಿ ಹೊರಗಿನ ಮನುಷ್ಯನಾಗಿ ಅವತರಿಸಿ ಬೋಧಿಸುವವನು ಸೃಷ್ಟಿ ಪೂರ್ವದಲ್ಲಿರುವ ದೇವರೆಯೆಂದು ತಿಳಿಯುತ್ತಿದೆ. ಸೃಷ್ಠಿ ನಂತರ ದೇವರು ಶರೀರದಲ್ಲಿ ಕಾರ್ಯಗಳನ್ನು ನಿರ್ವಹಿಸುವುದಕ್ಕು, ತನ್ನನ್ನು ದೇವರಾಗಿ ಆರಾಧಿಸಿದವನ ಕರ್ಮವನ್ನು ಕ್ಷಮಿಸುವುದಕ್ಕು, ತೆಗೆದುಹಾಕುವುದಕ್ಕು ಮಾತ್ರವೇ ಇದ್ದಾನೆ ಹೊರತು ಆತನು ಅವತರಿಸಿ ಬೋಧಿಸುವ ಕೆಲಸವನ್ನು ಮಾಡುತ್ತಿಲ್ಲ. ಪರಮಾತ್ಮನಾದ ದೇವರೇ ಎರಡು ವಿಧಗಳ ಪಾತ್ರವನ್ನು ಪೋಷಿಸುತ್ತಿದ್ದಾನೆ. ಆತ್ಮನಾದ ದೇವರು ಶ್ರದ್ಧೆಹೊಂದಿದವನಿಗೆ ಶರೀರದಲ್ಲಿಯೇ ಜ್ಞಾನವನ್ನು ಅರ್ಥವಾಗುವಂತೆ ಮಾಡುತ್ತಿದ್ದಾನೆ. ಅಷ್ಟೇ ಅಲ್ಲದೆ ಶ್ರದ್ಧೆಯಿಲ್ಲದವನಿಗೆ ಅಜ್ಞಾನ ಮಾರ್ಗದಲ್ಲಿ ಹೋಗುವಂತೆ ಮಾಡುತ್ತಿದ್ದಾನೆ. ಶರೀರಗಳಲ್ಲಿ ಇರುವ ಜೀವಿಗಳನ್ನು

ಅನುಸರಿಸಿ ವಿಧಿಗಳನ್ನು (ಕೆಲಸಗಳನ್ನು) ನಿರ್ವಹಿಸುವುದರಿಂದ ಸ್ವತಃವಾಗಿ ಆತನೇ ಅಜ್ಞಾನವನ್ನು ಅಭಿವೃದ್ಧಿ ಮಾಡಿದಂತಿದೆ. ಅಜ್ಞಾನವು ಮನುಷ್ಯರಲ್ಲಿ ಅಭಿವೃದ್ಧಿಯಾದಂತೆಲ್ಲ ಅಧರ್ಮ ಆಚರಣೆ ಹೆಚ್ಚಾಗಿಹೋಗುತ್ತದೆ. ಆ ಲೆಕ್ಕಪ್ರಕಾರ ಶರೀರದಲ್ಲಿನ ತಂದೆಯಾದ ದೇವರು ಮನುಷ್ಯನೊಂದರ ಅಭಿಷ್ಟವನ್ನನುಸರಿಸಿ ಅಜ್ಞಾನವನ್ನು ಬೆಳೆವಣಿಗೆಮಾಡಿದಾಗ ಅದರಿಂದ ಅಧರ್ಮಗಳು ತಯಾರಾಗುತ್ತಿವೆ. ಅವುಗಳನ್ನು ಅಲ್ಲವೆಂದು ಖಂಡಿಸಿ ಧರ್ಮಗಳನ್ನು ಬೋಧಿಸುವುದಕ್ಕೆ ತಾತನಾದ ದೇವರ ಅವಶ್ಯಕತೆಯಿದೆ. ಹಾಗೆ ಧರ್ಮಸಂಸ್ಥಾಪನೆ ಮಾಡುವ ಕೆಲಸ ಇಲ್ಲದಿದ್ದರೆ. ಪ್ರಜೆಗಳು ಅಧರ್ಮಗಳನ್ನು ಬಿಟ್ಟು ಬರುವುದಿಲ್ಲ. ಅವರಿಗೆ ದೇವರ ಧರ್ಮಗಳು ತಿಳಿಯುವುದಿಲ್ಲ.

ಶರೀರದಲ್ಲಿನ ಆತ್ಮನಾದ ದೇವರು ಶರೀರದಲ್ಲಿ ತನ್ನ ಕೆಲಸವನ್ನು ನಿರ್ವರ್ತಿಸುವುದು ಹೊರತು ಹೊರಗಿನ ಧರ್ಮಗಳನ್ನು ತಿಳಿಸುವುದು, ಜ್ಞಾನವನ್ನು ಬೋಧಿಸುವುದು ಮಾಡಲಿಲ್ಲ. ತಂದೆಯಾದ ದೇವರು ಶರೀರದಲ್ಲಿ ಮನುಷ್ಯರ ಕರ್ಮವನ್ನನುಸರಿಸಿ ಪ್ರವರ್ತಿಸುತ್ತಾ ಜೀವಿಗೆ ಕಷ್ಟಸುಖಗಳನ್ನು ಒದಗಿಸುತ್ತಿದ್ದಾನೆ. ಹಾಗೇ ಅವನ ಶ್ರದ್ಧೆಯನ್ನನುಸರಿಸಿ ಜ್ಞಾನವನ್ನಾಗಲಿ, ಅಜ್ಞಾನವನ್ನಾಗಲಿ ಒದಗಿಸುತ್ತಿರುತ್ತಾನೆ. ಮನುಷ್ಯರ ಶ್ರದ್ಧೆ ಜ್ಞಾನದ ಮೇಲೆ ಕಡಿಮೆ, ಅಜ್ಞಾನದ ಮೇಲೆ ಹೆಚ್ಚು ಇರುವುದರಿಂದ ತನ್ನ ಕರ್ತವ್ಯದ ಪ್ರಕಾರ ಅವರ ಶ್ರದ್ಧೆಯನ್ನನುಸರಿಸಿ ಅವರಿಗೇನು ಇಷ್ಟವಾದರೆ ಅದನ್ನೇ ಒದಗಿಸುತ್ತಿರುತ್ತಾನೆ. ಮನುಷ್ಯರ ಶ್ರದ್ಧೆ ಅಜ್ಞಾನದ ಮೇಲೆಯೇ ಇರುವುದರಿಂದ, ಆತ್ಮನಾದ ದೇವರು ಅಜ್ಞಾನವನ್ನೇ ಒದಗಿಸುವನು. ಮನುಷ್ಯನ ಅಜ್ಞಾನದಿಂದ ಅಧರ್ಮಗಳು ಅಭಿವೃದ್ಧಿ ಆಗುತ್ತಿವೆ. ಒಂದು ಲೆಕ್ಕದಲ್ಲಿ ಹೇಳಿದರೆ ತಂದೆಯಾದ ದೇವರೇ ಮನುಷ್ಯನ ಅಭಿಷ್ಟವನ್ನನು ಸರಿಸಿ ಅಧರ್ಮಗಳು ಅಭಿವೃದ್ಧಿ ಆಗುವಂತೆ ಮಾಡುತ್ತಿದ್ದಾನೆ. ಅಲ್ಲಿಯವರೆಗು ಯಾವುದೆ ಕೆಲಸವಿಲ್ಲದ ತಾತನಾದ ದೇವರು ಆತ್ಮದಿಂದ ಅಭಿವೃದ್ಧಿಯಾದ ಅಧರ್ಮಗಳನ್ನು ಇಲ್ಲದಂತೆ ಮಾಡಬೇಕಾದ ಜವಾಬ್ದಾರಿಯನ್ನು ಕೈಹಿಡಿದು ಯಾರಿಗೂ ತಿಳಿಯದಂತೆ ಭೂಮಿಮೇಲಕ್ಕೆ ಮನುಷ್ಯನಂತೆ ಅವತರಿಸಿ ಪುನಃ ಧರ್ಮಪ್ರತಿಸ್ಥಾಪನೆ ಮಾಡುತ್ತಿದ್ದಾನೆ, ಇದೆಲ್ಲ ಒಂದು ವಿಚಿತ್ರವಾಗಿದೆ ಅಲ್ಲವೆ!

ನಮಗೆ ಹೇಗಿದ್ದರೂ ನಡೆಯುವ ಕೆಲಸ ಮಾತ್ರ ಅದೇ. ಇಲ್ಲಿ ಹೇಳಿದ ನಾಲ್ಕು ಶ್ಲೋಕಗಳು ಪರಮಾತ್ಮನನ್ನು ಕುರಿತು ಎಂದರೇ ತಾತನಾದ ದೇವರನ್ನು ಕುರಿತು ಹೇಳಿರುವವೇಯೆಂದು ತಿಳಿಯಬೇಕು. ಇಂತಹ ಶ್ಲೋಕಗಳು ತಾತನಾದ ದೇವರನ್ನು ಕುರಿತು ಹೇಳಿರುವ ಶ್ಲೋಕಗಳು ಭಗವದ್ಗೀತೆಯಲ್ಲಿಯೂ ಸಹಾ ಕೆಲವೇ ಇವೆ. ತಂದೆಯಾದ ದೇವರನ್ನು ಕುರಿತು ಹೇಳಿದ ಶ್ಲೋಕಗಳು ಹೆಚ್ಚಾಗಿವೆ. ತಂದೆ ತಾತ ತಾರತಮ್ಯವನ್ನು ತಿಳಿಯುವುದಕ್ಕೆ ತಂದೆಯಾದ ದೇವರನ್ನು ಕುರಿತು ಹೇಳಿದ ಶ್ಲೋಕಗಳು ಮೂರನ್ನು ಇಲ್ಲಿ ನೋಡೋಣ.

ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 14ನೇ ಶ್ಲೋಕ ...

**ಶ್ಲೋ॥ 14. ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹ ಮಾಶ್ರಿತಃ ।**
**ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್॥**

**ಭಾವಾರ್ಥ :– ನಾನು ಸಕಲ ಜೀವರಾಶಿಗಳ ಶರೀರಗಳಲ್ಲಿ ಅಗ್ನಿ ದೇವರಾಗಿದ್ದು, ಅವರು ತಿನ್ನುವ ನಾಲ್ಕು ವಿಧಗಳ ಆಹಾರವನ್ನು, ಆಹಾರದಲ್ಲಿನ ಪೋಷಕ ಪದಾರ್ಥಗಳನ್ನು ಜೀರ್ಣವಾಗುವಂತೆ ಮಾಡುತ್ತಿದ್ದೇನೆ.**

ಮೋಕ್ಷ ಸನ್ಯಾಸ ಯೋಗದಲ್ಲಿ 61, 65 ಶ್ಲೋಕಗಳು. ..

**ಶ್ಲೋ॥ 61. ಈಶ್ವರ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ।**
**ಭ್ರಾಮಯನ್ ಸರ್ವಭೂತಾನಿ ಯಾಂತ್ರಾ ರೂಢಾನಿ ಮಾಯಯಾ॥**

**ಭಾವಾರ್ಥ :– ಸರ್ವ ಜೀವರಾಶಿಗಳ ಶರೀರಗಳಲ್ಲಿ ಆ ಶರೀರಗಳಿಗು, ಜೀವಿಗಳಿಗು ಅಧಿಪತಿಯಾಗಿ ಅವರ ಹೃದಯ ಸ್ಥಾನದಲ್ಲಿ ಇದ್ದೇನೆ. ಅಯಸ್ಕಾಂತದಲ್ಲಿನ ಶಕ್ತಿ ಕಾಣಿಸದಂತಿದ್ದು ಸೂಜಿಯನ್ನು ಕದಲಿಸುತ್ತಿದಂತೆ, ಶರೀರದಲ್ಲಿರುವ ನಾನು ಕಾಣಿಸದಂತಿದ್ದು ಸಕಲ ಜೀವಿಗಳನ್ನು ಕದಲಿಸುತ್ತಿದ್ದೇನೆ. ಆದುದರಿಂದ ಶರೀರಗಳ ಮೂಲಕ ಅನೇಕವಾದ ಕೆಲಸಗಳು ನಡೆಯುತ್ತಿವೆ.**

**ಶ್ಲೋ॥ 65. ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿಮೇ॥**

**ಭಾವಾರ್ಥ:– ನನ್ನನ್ನೇ ಸ್ಮರಿಸು ನೀನು ನನಗೆ ಭಕ್ತನಾಗಿರು. ನನ್ನನ್ನು ಮಾತ್ರ ಮುಗಿ. ನನಗೇ ಪೂಜೆಮಾಡು. ಹಾಗೆ ಮಾಡುವುದರಿಂದ ನೀನು ನನ್ನನ್ನೇ ಹೊಂದುತ್ತೀಯಾ. ಈ ಮಾತನ್ನು ಪ್ರತಿಜ್ಞೆಮಾಡಿ ಹೇಳುತ್ತಿದ್ದೇನೆ.**

ಈ ವಿಧವಾಗಿ ಆತ್ಮನಾದ ದೇವರು ಶರೀರದಲ್ಲಿದ್ದು, ತಾನು ಮಾಡುವ ಕೆಲಸಗಳನ್ನು ಕುರಿತು ಹೇಳುವುದೆ ಅಲ್ಲದೆ ತನ್ನನ್ನು ನಂಬಿ, ತನ್ನನ್ನೇ ಆರಾಧಿಸಿದವನನ್ನು ಕೊನೆಗೆ ಮರಣ ಸಮಯದಲ್ಲಿ ತನ್ನಲ್ಲಿಯೇ ಬೆರೆತುಹೋಗುವಂತೆ ಮಾಡುವೆನೆಂದು ಹೇಳಿದ್ದಾನೆ. **ಮನುಷ್ಯ ಆರಾಧಿಸಬೇಕಾಗಿರುವುದು ಶರೀರದಲ್ಲಿನ ತಂದೆಯಾದ ಆತ್ಮ ದೇವರನ್ನೇ.** ಅದೇ ವಿಷಯವನ್ನೇ ಶ್ಲೋಕಗಳಲ್ಲಿ ಹೇಳುವುದು ನಡೆದಿದೆ. ಜೀವಾತ್ಮ ಸಕ್ರಮವಾಗಿ ಜ್ಞಾನವನ್ನು ತಿಳಿದು ಧರ್ಮದ ಪ್ರಕಾರ ನಡೆಯಲ್ಪಟ್ಟಾಗ ಅವನಿಗಿರುವ ಸಂಚಿತ ಕರ್ಮವೆಲ್ಲವೂ ಸುಟ್ಟುಹೋಗುತ್ತದೆ. ಜ್ಞಾನವೆನ್ನುವ ಅಗ್ನಿಯಿಂದ ಕರ್ಮವೆಲ್ಲವೂ ಸುಟ್ಟುಹೋಗಿ, ಅವನು ಕರ್ಮವಿಲ್ಲದ ಮನುಷ್ಯನಾಗಿ ಉಳಿದುಹೋಗುತ್ತಾನೆ. ಕರ್ಮವಿಲ್ಲದ ಮನುಷ್ಯ ಮರಣಿಸಿದ ನಂತರ ಅವನು ಮತ್ತೊಂದು ಜನ್ಮಕ್ಕೆ ಹೋಗುವುದಿಲ್ಲ. **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥದಲ್ಲಿ ನಾವು ಮೊದಲೇ 1980ನೇ ವರ್ಷವೇ ಬರೆದಿರುವಂತೆ, ಕೊನೆಯ ಮರಣದಲ್ಲಿ ಜೀವಿಯು ಜನ್ಮಗಳಿಗೆ ಹೋಗದಂತೆ ಶರೀದಲ್ಲಿನ ತನ್ನ ಆತ್ಮನಲ್ಲಿಯೇ ಐಕ್ಯವಾಗಿಹೋಗುತ್ತದೆ. ಜೀವಾತ್ಮದೊಂದಿಗೆ ಕೂಡಿರುವ ಆತ್ಮ ಪ್ರತ್ಯೇಕವಾಗಿ ತಯಾರಾಗಿರುವುದಾಗಿ ಪರಮಾತ್ಮನಲ್ಲಿ ಬೆರೆತುಹೋಗುತ್ತಿದೆ. ಈ ವಿಧವಾಗಿ ಶರೀರದಲ್ಲಿ ಆತ್ಮನಾಗಿರುವ ದೇವರು ಜೀವಾತ್ಮಗು ಪರಮಾತ್ಮಗು ಮಧ್ಯವರ್ತಿ ಯಾಗಿದ್ದು ತನ್ನೊಳಗೆ ಸೇರಿದವನನ್ನು ಪರಮಾತ್ಮನೊಳಗೆ ಸೇರಿಸುತ್ತದೆ. ಆದ್ದರಿಂದ ಆತ್ಮ **"ನನ್ನ ಮೂಲಕವೇ ಜೀವಾತ್ಮ ಪರಮಾತ್ಮನನ್ನು ಸೇರಬೇಕೆಂದು"** ದೈವ ಗ್ರಂಥದಲ್ಲಿ ಒಂದುಕಡೆ ಹೇಳಿದ್ದಾರೆ. ಹೀಗೆ ಶ್ಲೋಕಗಳನ್ನು ಭಗವದ್ಗೀತೆಯಲ್ಲಿ ನೋಡಿದರೆ ಶರೀರದಲ್ಲಿ ಆತ್ಮನಾಗಿರುವ ದೇವರನ್ನು ಕುರಿತು ಹೇಳಿದ ವಿಷಯ ತಿಳಿಯುತ್ತದೆ.

ಭಗವದ್ಗೀತೆಯಲ್ಲಿ ಉಳಿದ ಶ್ಲೋಕಗಳೆಲ್ಲವುಗಳಲ್ಲಿ ಆತ್ಮನಾದ ದೇವರನ್ನು ಕುರಿತು ಹೇಳಿರುವವೇ ಇವೆ. ಆದರೇ ಅವುಗಳನ್ನು ಮನುಷ್ಯ ಗುರುತಿಸಲಾರದೆ ಹೋಗಿದ್ದಾನೆ. ಹಾಗೇ ಬಹಳ ಕಡಿಮೆ ಇರುವ ಪರಮಾತ್ಮ ಶ್ಲೋಕಗಳನ್ನು ಕುರಿತು ಕೂಡಾ ತಿಳಿಯಲಾರದೆ ಹೋಗಿದ್ದಾನೆ. ಆದ್ದರಿಂದ ಎರಡು ವಿಧಗಳ ಭಗವದ್ಗೀತೆ ಶ್ಲೋಕಗಳನ್ನು, ಖುರ್‌ಆನ್ ಗ್ರಂಥದಲ್ಲಿನ ಆಯತ್‌ಗಳನ್ನು ವಿವರಿಸಿ ಹೇಳಿದ್ದೇವೆ. ಬೈಬಲ್ ಗ್ರಂಥದಲ್ಲಿನ ವಾಕ್ಯಗಳನ್ನು ಪ್ರಾರಂಭದಲ್ಲಿಯೇ ಹೇಳಿದ್ದೇವೆ. ಯೋಹಾನ್ ಸುವಾರ್ತೆ ಐದನೇ ಅಧ್ಯಾಯದಲ್ಲಿ 20 ರಿಂದ 27ನೇ ವಾಕ್ಯದವರೆಗು ಇರುವ ಸಮಾಚಾರವನ್ನು ಹೇಳಿ, ಅಲ್ಲಿ ತಂದೆ ಕುಮಾರನು ಎಂದು ಪ್ರಾರಂಭವಾದ ವಾಕ್ಯಗಳನ್ನು ಕುರಿತು ಹೇಳಿ, ಅವುಗಳಿಗೆ ಸಾಕ್ಷಿಯಾಗಿ ಉಳಿದ ಎರಡು ಗ್ರಂಥಗಳಲ್ಲಿನ ವಾಕ್ಯಗಳನ್ನು ಹೇಳಿಕೊಂಡಿದ್ದೇವೆ. ಈ ವಿಧವಾಗಿ ಆಳವಾಗಿ ಜ್ಞಾನವನ್ನು ತಿಳಿಯಲ್ಪಟ್ಟರೆ ಸೃಷ್ಠಿ ಪೂರ್ವದಲ್ಲಿ ದೇವರು ಪ್ರಪಂಚವನ್ನು ತಯಾರು ಮಾಡಿದ ನಂತರ ಪ್ರಪಂಚದಲ್ಲಿ ಜೀವರಾಶಿಗಳನ್ನು ಸೃಷ್ಠಿಸುವುದಕ್ಕೆ ತನ್ನಿಂದ ಆತ್ಮವನ್ನು, ಜೀವಾತ್ಮವನ್ನು ತಯಾರು ಮಾಡಿದ್ದಾನೆ. ತನ್ನ ಪ್ರಕೃತಿಯನ್ನು, ತನ್ನ ಆತ್ಮ, ಜೀವಾತ್ಮವನ್ನು ಸೇರಿಸಿ ವಿಶ್ವ, ವಿಶ್ವದಲ್ಲಿನ ಜೀವರಾಶಿಗಳನ್ನು ಸೃಷ್ಠಿಸಿದ್ದಾನೆ. ಈ ವಿಧವಾಗಿ ದೇವರು ಮೊದಲು ವಿಶ್ವವನ್ನು ತಯಾರು ಮಾಡುವುದಕ್ಕೆ 1) ಪ್ರಕೃತಿ, 2) ಪರಮಾತ್ಮ 3) ಆತ್ಮ 4) ಜೀವಾತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಅದರಲ್ಲಿ ಒಂದು ಜಢವಾದ ಜೀವವಿಲ್ಲದ ಪ್ರಕೃತಿ ತಯಾರಾಗಿದ್ದು, ಮೂರು ಚೈತನ್ಯವಂತಗಳಾದ ಆತ್ಮಗಳು ತಯಾರಾಗಿವೆ. ಆದುದರಿಂದ ಸೃಷ್ಟ್ಯಾದಿಯಲ್ಲಿ ದೇವರು ನಾಲ್ಕು ಭಾಗಗಳಾಗಿ ತಯಾರಾಗಿದ್ದಾನೆಂದು ಹೇಳಬಹುದು. ಸೃಷ್ಠಿಗೆ ಪೂರ್ವದಲ್ಲಿರುವ ದೇವರು ಬೇರೆಯಾಗಿ, ಸೃಷ್ಠಿ ನಂತರ ಇರುವ ದೇವರು ಬೇರೆಯಾಗಿರುವಂತೆ, ದೈವಗ್ರಂಥಗಳಲ್ಲಿ ತಿಳಿಯಲ್ಪಟ್ಟಿದೆ. ಸೃಷ್ಠಿ ಪೂರ್ವದಲ್ಲಿರುವ ಪರಮಾತ್ಮ ಸ್ವತಃವಾಗಿ ಸೃಷ್ಠಿ ನಂತರ ಬಂದಿರುವ, ಆತನನ್ನೇ ದೇವರಾಗಿ ಗೌರವಿಸಬೇಕೆಂದು, ಆರಾಧಿಸಬೇಕೆಂದು ಹೇಳಿದಂತೆ ಇಂಜೀಲು ಗ್ರಂಥದಲ್ಲಿ ಯೋಹಾನ್ ಸುವಾರ್ತೆ 20 ರಿಂದ 27 ರವರೆಗು ಇರುವ ವಾಕ್ಯಗಳಲ್ಲಿ ಇದೆ. ಅಷ್ಟೇಅಲ್ಲದೆ ಅಂತಿಮ ದೈವಗ್ರಂಥ

ಖುರ್‌ಆನ್ ಸುರಾ 3 ಆಯತ್ 18ರಲ್ಲಿ ಕೂಡಾ ಸ್ವತಃವಾಗ ಅಲ್ಲಾಹ್‌ನೇ **“ಆತನು ಹೊರತು ಬೇರೆ ಆರಾಧ್ಯ ದೈವ ಇಲ್ಲವೆಂದು”** ಹೇಳಿದ್ದಾನೆ. ಅಲ್ಲಾಹ್‌ನೇ ತನಗಿಂತ ಬೇರೆಯಾಗಿರುವ ದೇವರನ್ನು ಆರಾಧಿಸಿರೆಂದು, ಆತನೇ ಮನುಷ್ಯರಿಗೆ ನಿಜವಾದ ದೇವರೆಂದು (3–18) ವಾಕ್ಯದಲ್ಲಿ ಹೇಳಿದಂತೆ ಅರ್ಥವಾಗುತ್ತಿದೆ. ಇಂಜೀಲು ಗ್ರಂಥದಲ್ಲಿ ಯೋಹಾನ್ 5–20 ರಿಂದ 27 ವರೆಗು, ಹಾಗೆ ಖುರ್‌ಆನ್ 3–18 ವಾಕ್ಯದಲ್ಲಿಯೂ ಮತ್ತು ಭಗವದ್ಗೀತೆಯಲ್ಲಿ ರಾಜವಿದ್ಯೆ ರಾಜಗುಹ್ಯ ಯೋಗದಲ್ಲಿ 25, 34 ಶ್ಲೋಕದಲ್ಲಿಯೂ ಶರೀರದಲ್ಲಿ ಅಧಿಪತಿಯಾಗಿರುವ ಆತ್ಮವನ್ನೇ ದೇವರಾಗಿ ಆರಾಧಿಸಬೇಕೆಂದು ಸ್ವತಃವಾಗಿ ದೇವರೇ ಹೇಳಿದ್ದಾನೆ.

ಮನುಷ್ಯರು ಒಟ್ಟಾರೆ 12 ಮತಗಳಾಗಿ ವಿಭಜಿಸಲ್ಪಟ್ಟಿದ್ದರೂ ಅದರಲ್ಲಿ ಮುಖ್ಯವಾದವು, ದೊಡ್ಡವು ಮೂರು ಮಾತ್ರವೇ. ಅವುಗಳೇ ಹಿಂದೂ (ಇಂದೂ), ಕ್ರೈಸ್ಥನ, ಇಸ್ಲಾಮ್ ಮತಗಳೆಂದು ಹೇಳಲ್ಪಡುತ್ತಿವೆ. ಈ ಮೂರು ಮತದವರು ಒಬ್ಬೊಬ್ಬರು ಒಂದೊಂದು ಗ್ರಂಥವನ್ನು ತಮ್ಮ ಮತ ಗ್ರಂಥವೆಂದು ಹೇಳಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಆ ಮೂರು ಗ್ರಂಥಗಳು ಮತ ಗ್ರಂಥಗಳಲ್ಲ. ಆ ಮೂರು ದೈವ ಗ್ರಂಥಗಳು. ಅವು ಯಾವೊಂದು ಮತಕ್ಕೆ ಸಂಬಂಧವಿಲ್ಲ. ಮೂರು ದೈವಗ್ರಂಥಗಳು ಸಮಸ್ತ ಮಾನವರಿಗೆ ಸಂಬಂಧಿಸಿರುವವೆಂದು ಹೇಳಬಹುದು. ಮೂರು ದೈವಗ್ರಂಥಗಳಲ್ಲಿ ದೇವರ ಜ್ಞಾನ ಸಂಪೂರ್ಣವಾಗಿದೆ. ಸೃಷ್ಟಿಯನ್ನು ಸೃಷ್ಟಿಸಿದ ದೇವರು ಸೃಷ್ಟಿಯನ್ನು ಪಾಲಿಸುವುದಕ್ಕೆ ದೇವರನ್ನು ನೇಮಿಸಿ ಆತನನ್ನೇ ಆರಾಧಿಸಿರೆಂದು, ಆತನು ಹೊರತುಪಡಿಸಿ ಬೇರೆ ಆರಾಧ್ಯನು ಇಲ್ಲವೆಂದು ಹೇಳುವುದು ನಡೆದಿದೆ. ಸೃಷ್ಟಿ ಪೂರ್ವದಲ್ಲಿರುವ ದೇವರು, ಸೃಷ್ಟಿ ನಂತರ ಆತನು ಕೆಲಸ ಮಾಡದೆ ತನಗೆ ಬದಲು ತನಗೆ ಹುಟ್ಟಿದ, ತನ್ನ ಕುಮಾರನಾದ ತನ್ನ ಆತ್ಮನನ್ನೇ ದೇವರಾಗಿ ನೇಮಿಸಿ ಸರ್ವ ಅಧಿಕಾರಗಳು ಆತನಿಗೇ ಕೊಟ್ಟು ಆತನೇ ಎಲ್ಲರಿಗೂ ದೇವರೆಂದು ಆತನನ್ನೇ ಆರಾಧಿಸಬೇಕೆಂದು ಹೇಳುವುದಾಗಿದೆ. ಹಾಗೆ ಹೇಳಿ ವಿಶ್ವವೆಲ್ಲಾ ವ್ಯಾಪಿಸಿರುವ ಪರಮಾತ್ಮ ಸುಮ್ಮನೆ

ಸಾಕ್ಷಿಯಾಗಿ ಇದ್ದಾನೆ. ಆತನು ಯಾರಿಗೂ ಯಾವ ಅಗತ್ಯವೂ ಇಲ್ಲದವನಾದರೂ ದೈವ ಧರ್ಮಗಳಿಗೆ ಹಾನಿ ಉಂಟಾಗಿ ಅಧರ್ಮಗಳು ವಿಜೃಂಭಿಸಿದಾಗ ಪರಮಾತ್ಮನಾದ ದೇವರು ಮನುಷ್ಯನಂತೆ ಅವತರಿಸಿ ತನ್ನ ಧರ್ಮಗಳನ್ನು ಪುನಃ ಮನುಷ್ಯರಿಗೆ ತಿಳಿಸುತ್ತಾನೆ. ಮಾನವ ರೂಪದಲ್ಲಿ ಮಾನವರಿಗೆ ತನ್ನ ಧರ್ಮಗಳನ್ನು ತಿಳಿಸಿದ ಭಗವಂತನು ಪುನಃ ಪರಮಾತ್ಮನಾಗಿಯೇ ಬದಲಾಗಿ ಹೋಗುತ್ತಾನೆ.

ಇಲ್ಲಿಯವರೆಗು ಭೂಮಿಮೇಲಿರುವ ಜ್ಞಾನಿಗಳಿಗೆ ದೇವರನ್ನು ಕುರಿತು ಸ್ವಲ್ಪ ಜ್ಞಾನ ತಿಳಿದಿದ್ದರೂ **ಸೃಷ್ಠಿ ಪೂರ್ವದಲ್ಲಿರುವ ದೇವರು, ಸೃಷ್ಠಿ ನಂತರದ ದೇವರು** ಎರಡು ವಿಧಗಳ ದೇವರು ತಿಳಿದಿಲ್ಲ. ಈದಿನ ಎಲ್ಲಾ ಮತದವರು "ದೇವರು ಒಬ್ಬನೇ" ಎನ್ನುವ ಮಾತನ್ನು ಹೇಳುತ್ತಿರುತ್ತಾರೆ. ತಾವು ಒಬ್ಬ ದೇವರನ್ನು ಆರಾಧಿಸುತ್ತಿದ್ದರೂ, ಪರಮಾತ್ಮ ದೇವರನ್ನಾ? ಅಥವಾ ಆತ್ಮ ದೇವರನ್ನಾ? ಎನ್ನುವ ವಿಷಯ ತಿಳಿದಿಲ್ಲ. ದೇವರು ತಾತ ದೇವರಾಗಿ, ತಂದೆ ದೇವರಾಗಿ ಎರಡು ವಿಧಗಳು ವಿಭಜಿಸಲ್ಪಟ್ಟಿದ್ದಾನೆಂದು ಜ್ಞಾನಿಗಳು ಹೇಳಿದರೂ, ಮೂರು ಮತದವರಿಗೆ ಗೊತ್ತಿಲ್ಲ. ಈ ವಿಷಯ ಮೂರು ದೈವ ಗ್ರಂಥಗಳಲ್ಲಿ ಹೇಳಿದ್ದರೂ ಯಾರ ಗ್ರಾಹಿಕೆಗೆ ಬರಲಿಲ್ಲ. ಈ ವಿಷಯವನ್ನು ಹೊರಗೆ ವಿವರವಾಗಿ ಹೇಳುವವರಲ್ಲಿ, ಎಂದರೇ ವಿವರಿಸಿ ಹೇಳುವವರಲ್ಲಿ ಬಹುಶ ನಾವು ಮೊದಲನೆಯವರಾಗುತ್ತೇವೆ ಎಂದುಕೊಳ್ಳುತ್ತೇನೆ. ನನ್ನ ಮಾತನ್ನು ಯಾರು ಖಂಡಿಸುವುದಕ್ಕೆ ಸಾಧ್ಯವಿಲ್ಲದಂತೆ ನನ್ನ ಭಾವನೆಗೆ ಸರಿಹೋಗುವ ವಾಕ್ಯಗಳು ದೈವಗ್ರಂಥಗಳಲ್ಲಿ ಮೊದಲೇ ಬರೆದಿರುವುದರಿಂದ ಧೈರ್ಯವಾಗಿ ನಾನು ಈ ವಿಷಯವನ್ನು ಹೊರಗೆ ಹೇಳುತ್ತಿದ್ದೇನೆ. ಇಲ್ಲಿಯವರೆಗು ದೇವರು ಇಬ್ಬರೆಂದು, ಒಬ್ಬರು ಕೆಲಸ ಮಾಡದ ದೇವರೆಂದು, ಎರಡನೆಯವನು ಕೆಲಸವಿರುವ ದೇವರೆಂದು ಹೇಳುವುದಲ್ಲದೆ ಸೃಷ್ಟ್ಯಾದಿ ನಂತರ ದೇವರು ತನ್ನಿಂದ ಒಂದು ಪ್ರಕೃತಿಯನ್ನು, ಎರಡು ಆತ್ಮಗಳನ್ನು ತಯಾರು ಮಾಡಿದ್ದಾನೆಂದು ಕೂಡಾ ಹೇಳಿದ್ದೇವೆ. ಸೃಷ್ಠಿ ನಂತರ ದೇವರು ತನ್ನಿಂದ ಬಿಡುಗಡೆಯಾದ ಪ್ರಕೃತಿ, ಆತ್ಮ

ಜೀವಾತ್ಮಗಳನ್ನು ಮತ್ತು ತನ್ನನ್ನು ಸೇರಿಸಿಕೊಂಡು ನಾಲ್ಕು ಭಾಗಗಳಾಗಿ ತಯಾರಾಗಿದ್ದಾನೆ.

ಸೃಷ್ಠಿಗೆ ಪೂರ್ವದಲ್ಲಿ ದೇವರು ದೇವರಾಗಿಯೇ ಒಬ್ಬನೇ ಇರುತ್ತಿದ್ದನು. ಆಗ ವಿಶ್ವವಿಲ್ಲ ಎಂದರೇ ಪ್ರಕೃತಿ ಇಲ್ಲ. ತಾನು ಒಬ್ಬನಾಗಿ ದೇವರಿರುವಾಗ ಆತನಿಗೆ ಹೆಸರು, ರೂಪ, ಕೆಲಸ ಇರುತ್ತಿತ್ತು. ಆಗ ನಾವು ಇಲ್ಲ. ಆದ್ದರಿಂದ ದೇವರ ರೂಪ ಯಾವುದೊ ಹೇಗಿರುತ್ತಿತ್ತೊ ಯಾರ ಊಹೆಗು ಕೂಡಾ ತಿಳಿದಿಲ್ಲ. ಹಾಗೇ ಹೆಸರು ಏನೆಂದು ಇರುತ್ತಿತ್ತೋ ಯಾರಿಗೂ ಗೊತ್ತಿಲ್ಲ. ಇಂತಹ ಹೆಸರು ಇರಬಹುದು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಆತನ ಕೆಲಸವನ್ನು ಮಾತ್ರ ಹೇಳಬಹುದು. ಸೃಷ್ಠಿಯನ್ನು ತಯಾರು ಮಾಡಿದವನು ಆದ್ದರಿಂದ ದೇವರನ್ನು ಸೃಷ್ಠಿಕರ್ತಯೆಂದು ಹೇಳಬಹುದು. ಸೃಷ್ಠಿಯನ್ನು ತಯಾರು ಮಾಡಿದ ನಂತರ ತಾನು ತಯಾರು ಮಾಡಿದ ಆತ್ಮಗಿಂತ ಬೇರೆಯಾಗಿದ್ದಾನೆ ಆದ್ದರಿಂದ ಪರಮಾತ್ಮಯೆಂದು ಗುರುತಾಗಿ ಕರೆಯುತ್ತಿದ್ದೇವೆ. ಹಾಗೆಯೇ ಈದಿನ ಪರಮಾತ್ಮನಾದ ದೇವರಿಗೆ ರೂಪವಾಗಲಿ, ಹೆಸರಾಗಲಿ, ಕೆಲಸವಾಗಲಿ ಇಲ್ಲವೆಂದು ಹೇಳುತ್ತಿದ್ದೇವೆ. ಸೃಷ್ಠಿ ನಂತರ ಪರಮಾತ್ಮನಾದ ದೇವರು ನಾಮ, ರೂಪ, ಕ್ರಿಯಾರಹಿತನಾಗಿ ಇದ್ದಾನೆಂದು ಹೇಳುತ್ತಿದ್ದೇವೆ.

ಚೈತನ್ಯವಂತವಾದ ಪ್ರಪಂಚವನ್ನು ಚೈತನ್ಯವಂತವಾದ ದೇವರೇ ನಡೆಸಬೇಕು. ಆದರೇ ಸೃಷ್ಠಿಕರ್ತನಾದ ದೇವರು ತಾನು ಸೃಷ್ಠಿ ನಂತರ ಚೈತನ್ಯ ಇಲ್ಲದವನಾಗಿ ಬದಲಾಗಿಹೋಗಿದ್ದಾನೆ. ಹಾಗೆಯೇ ದೃಶ್ಯರೂಪವಾದ ಪ್ರಪಂಚ ವನ್ನು ನಡೆಸುವುದಕ್ಕೆ ದೃಶ್ಯರಹಿತವಾದವನು ಕೆಲಸಕ್ಕೆ ಬರುವುದಿಲ್ಲ. ದೃಶ್ಯವಾದವನು ಎಂದರೇ ಆಕಾರ ಇರುವವನು ಆಗಬೇಕು. ಆದರೇ ಸೃಷ್ಠಿಕರ್ತನಾದ ದೇವರು ತಾನು ರೂಪ ಇಲ್ಲದವನಾಗಿ ಬದಲಾಗಿಹೋಗಿದ್ದಾನೆ. ಹಾಗೆಯೇ ಕಾರ್ಯರೂಪವಾದ ಪ್ರಪಂಚವನ್ನು ನಡೆಸುವುದಕ್ಕೆ ಕಾರ್ಯಗಳು ಮಾಡುವವನು ಬೇಕು. ಆದರೇ ಸೃಷ್ಠಿಕರ್ತನಾದ ದೇವರು ಕಾರ್ಯರಹಿತನಾಗಿ ಬದಲಾಗಿ ಹೋಗಿದ್ದಾನೆ. ಆದುದರಿಂದ ರೂಪ, ನಾಮ, ಕ್ರಿಯೆಗಳಿರುವ ಪ್ರಪಂಚವನ್ನು

ರೂಪ, ನಾಮ, ಕ್ರಿಯೆಗಳಿರುವ ದೇವರೇ ನಡೆಸಬೇಕು. ಆದುದರಿಂದ ಸೃಷ್ಠಿಕರ್ತನಾದ ದೇವರು ತಪ್ಪದೇ ಪ್ರಪಂಚವನ್ನು ನಡೆಸುವುದಕ್ಕೆ ಮತ್ತೊಬ್ಬ ದೇವರನ್ನು ಪ್ರಪಂಚವನ್ನು ತಯಾರುಮಾಡಿದಂತೆ ತಯಾರುಮಾಡಿದ್ದಾನೆ. ತನ್ನಿಂದ ವಿಭಜಿಸಿದ ಆತ್ಮವನ್ನ ಪ್ರಪಂಚವನ್ನು ನಡೆಸುವುದಕ್ಕೆ ಸರಿಯಾದ ದೇವರಾಗಿ ನಿರ್ಣಯಿಸಿದ್ದಾನೆ. ಆತ್ಮವನ್ನು ತಯಾರು ಮಾಡಿದ ಸೃಷ್ಠಿಕರ್ತ ಆತ್ಮಗಿಂತ ಬೇರೆಯಾಗಿ ಪರಮಾತ್ಮನಾಗಿ ಇರುವುದರಿಂದ ಪರಮಾತ್ಮ ಪ್ರಪಂಚದೊಂದಿಗೆ ಸಂಬಂಧವಿಲ್ಲದ ದೇವರಾಗಿ ತಯಾರಾಗಿದ್ದಾನೆ. ಪ್ರಪಂಚಕ್ಕೆ ಸಂಬಂಧವಾದ ದೇವರಿಗಿಂತ ಬೇರೆಯಾಗಿರುತ್ತಾ ಪ್ರಪಂಚದಲ್ಲಿನ ಮನುಷ್ಯ ರೆಲ್ಲರಿಗೂ 'ನನ್ನ ಕುಮಾರನಾದ ಆತ್ಮವೇ ದೇವರು ಆದರೆ, ನಾನು ಯಾವ ಕಾರಣಕ್ಕು ನಿಮಗೆ ದೇವರು ಅಲ್ಲವೆಂದು' ಹೇಳಿದ್ದಾನೆ. ಪ್ರಪಂಚದಲ್ಲಿರುವ ಮನುಷ್ಯ ಯಾರಾದರೂ ಪ್ರಪಂಚಕ್ಕೆ ದೇವರಾದವನನ್ನೇ ಆರಾಧಿಸಬೇಕೇ ಹೊರತು ಪರಮಾತ್ಮನನ್ನು ಆರಾಧಿಸಬಾರದೆಂದು ಕೂಡಾ ತಿಳಿಸಿದ್ದಾನೆ. ಪರಮಾತ್ಮ ಪ್ರಪಂಚದೊಂದಿಗೆ ಸಂಬಂಧ ಇಲ್ಲದವನಾಗಿರುವುದರಿಂದ ಪರಮಾತ್ಮ ವಿಷಯ ಯಾವ ಮಾನವನಿಗು ಗೊತ್ತಿಲ್ಲ. ಪರಮಾತ್ಮ ತಂದೆಯಾಗಿರುವಾಗ, ಆತ್ಮ ಕುಮಾರನಾಗಿದ್ದಾನೆ. ಕುಮಾರನು, ತಂದೆ ಇಬ್ಬರು ದೇವರುಗಳೇಯೆಂದು ಹೇಳಬಹುದು. ಅದನ್ನೇ ಇಲ್ಲಿಯವರೆಗು 'ಸೃಷ್ಠಿ ಪೂರ್ವದಲ್ಲಿ ದೇವರು, ಸೃಷ್ಠಿ ನಂತರ ದೇವರು' ಎಂದು ಹೇಳಿಕೊಂಡಿದ್ದೇವೆ. ನೀರಿಗೆ ಪಾತ್ರೆ ಆಧಾರವಾದಂತೆ ಆತ್ಮಗು ಜೀವಾತ್ಮಗು, ನೀರಿಗೆ ಪಾತ್ರೆಯಂತೆ, ಪ್ರಕೃತಿ ಇದೆ. ನೀರಿಗೆ ಆಧಾರವಾದ ಪಾತ್ರೆಯ ಅಶ್ಯಕತೆಯನ್ನು ಗ್ರಹಿಸಿದ ದೇವರು ಆತ್ಮ, ಜೀವಾತ್ಮಗಳನ್ನು ತಯಾರು ಮಾಡುವುದಕ್ಕಿಂತ ಮೊದಲೇ ಪ್ರಕೃತಿಯನ್ನು ತಯಾರು ಮಾಡಿದ್ದಾನೆ. ಆದ್ದರಿಂದ ದೇವರಿಂದ ಮೊದಲು ಪ್ರಕೃತಿ ನಂತರ ಆತ್ಮ, ಆ ನಂತರ ಜೀವಾತ್ಮ ತಯಾರಾಗಿವೆ. ದೇವರು ಮೂಲಕರ್ತನಾಗಿದ್ದು ಮೊದಲು ಪಾತ್ರೆಯಾದ ಪ್ರಕೃತಿಯನ್ನು, ನಂತರ ಪಾತ್ರೆಯಲ್ಲಿನ ನೀರಾಗಿ ನಿಲ್ಲುವ ಆತ್ಮವನ್ನು, ಜೀವಾತ್ಮವನ್ನು ತಯಾರುಮಾಡಿದ್ದಾನೆ.

**ಪ್ರಶ್ನೆ :– ದೇವರು ಮೊದಲು ಪಾತ್ರೆಯಾಗಿರುವ ಪ್ರಕೃತಿಯನ್ನು ತಯಾರು ಮಾಡಿದ್ದಾನೆ ಅಲ್ಲವೆ! ಆ ಪಾತ್ರೆಯನ್ನು ಆಧಾರ ಮಾಡಿಕೊಂಡು ಇರುವುದಕ್ಕೆ ಅಗತ್ಯವಾದ ಜೀವಾತ್ಮಯೆನ್ನುವ ನೀರನ್ನು ತಯಾರು ಮಾಡಿದ್ದರೆ ಸರಿಹೋಗುತ್ತದೆ ಅಲ್ಲವೆ! ಹಾಗಲ್ಲದೆ ಆತ್ಮವನ್ನು ಕೂಡಾ ತಯಾರು ಮಾಡಿ ಜೀವಾತ್ಮದೊಂದಿಗೆ ಪಾತ್ರೆಯಲ್ಲಿಯೇ ಇಟ್ಟಿದ್ದಾನೆ. ಆಗ ಒಂದೇ ಪಾತ್ರೆಯಲ್ಲಿ ಜೀವಾತ್ಮ, ಆತ್ಮ ಎರಡು ಇವೆ. ಸೃಷಿಕರ್ತನಾದ ಪರಮಾತ್ಮ ಕೂಡಾ ನೀರಾಗಿಯೇ ಇದ್ದಾನೆ ಆದ್ದರಿಂದ ಮೂರು ಆತ್ಮಗಳು ಏರ್ಪಡುತ್ತಿವೆ. ಒಂದು ಪರಮಾತ್ಮ, ಎರಡು ಆತ್ಮ, ಮೂರು ಜೀವಾತ್ಮ, ಮೂರು ಆತ್ಮಗಳು ಒಂದು ಪ್ರಕೃತಿ ವಿಶ್ವದಲ್ಲಿ ಇವೆ. ಇವು ನಾಲ್ಕು ಹೊರತುಪಡಿಸಿ ಇನ್ನೊಂದು ಏನು ಇಲ್ಲ. ಪ್ರಕೃತಿ ಜೀವ ಇಲ್ಲದಾಗಿದ್ದು, ಜೀವವಿರುವವನು ಜೀವಾತ್ಮ, ಪ್ರಕೃತಿಗು ಜೀವಾತ್ಮಗು ಸ್ವಯಂಶಕ್ತಿ ಇಲ್ಲ. ಪ್ರಕೃತಿಯನ್ನು, ಜೀವಿಯನ್ನು ಕದಲಿಸುವುದಕ್ಕೆ ಚೈತನ್ಯಕೊಡುವುದಕ್ಕೆ ಜೀವಾತ್ಮವನ್ನು ಪ್ರಕೃತಿಯಲ್ಲಿ ಆಡಿಸುವುದಕ್ಕೆ ಆತ್ಮಯೆನ್ನುವ ದೇವರು ಅಗತ್ಯವಾಗಿದ್ದಾನೆ. ಆತ್ಮವನ್ನು ದೇವರಾಗಿ ಪರಮಾತ್ಮ ಮಾಡಿ ತಾನು ಮೂವರನ್ನು ನೋಡುತ್ತಾ ಸಾಕ್ಷಿಯಾಗಿ ಇದ್ದಾನೆ. ಇಲ್ಲಿ ಆತ್ಮದ ಅವಶ್ಯಕತೆ ಏಕೆ ಬಂದಿದೆ? ಪರಮಾತ್ಮನೇ ಆತ್ಮ ಕೆಲಸವನ್ನು ಮಾಡಿರಬಹುದು ಅಲ್ಲವೆ! ಎನ್ನುವುದು ಪ್ರಶ್ನೆ, ಇದಕ್ಕೆ ನೀವೇನೇಳುತ್ತೀರಾ?**

**ಉತ್ತರ :–** ಈ ಪ್ರಶ್ನೆಯನ್ನು ಸುಲಭವಾಗಿ ಯಾರಾದರೂ ಕೇಳಬಹುದು. ಇದು ಸಮಯಾನುಕೂಲವಾಗಿ ಕೇಳಬೇಕಾದ ಪ್ರಶ್ನೆಯೇ. ಆದರೇ ಇದಕ್ಕೆ ನಮ್ಮ ಉತ್ತರ ಏನೆಂದರೆ! ಒಂದು ಆಟ ಆಡಬೇಕಾಗಿ ಬಂದಾಗ ಅದಕ್ಕೆ ಒಂದುಕಡೆ ಸ್ವಲ್ಪಜನ, ಮತ್ತೊಂದುಕಡೆ ಸ್ವಲ್ಪಜನ ಇರುವುದು ಸಹಜ. ಒಂದು ಪುಟ್‌ಬಾಲ್ ಆಟವಾಗಲಿ, ಕ್ರಿಕೆಟ್ ಆಟವಾಗಲಿ, ಯಾವ ಆಟದಲ್ಲಾಗಲಿ ಸಮಾನವಾಗಿ ಎರಡುಕಡೆ ಆಟಗಾರರಿರುವುದು ಸಹಜ. 'ವಿಶ್ವ' ಎನ್ನುವ ಮೈದಾನದಲ್ಲಿ 'ಜಗತ್ತು' ಎನ್ನುವ ಆಟ ಆಡುವುದಕ್ಕೆ ಒಂದುಕಡೆ ಇಬ್ಬರು ಮತ್ತೊಂದುಕಡೆ ಇಬ್ಬರು ಒಟ್ಟು ನಾಲ್ವರು ಆಟಗಾರರು ಅಗತ್ಯ. ಉದಾಹರಣೆಗೆ ನಾಲ್ವರು ಸೇರಿ ಟೆನ್ನಿಸ್ ಆಟ ಆಡುವುದು ನೋಡುತ್ತಿರುತ್ತೇವೆ. ಹಾಗೆಯೇ

'ಜಗತ್ ನಾಟಕ' ಎನ್ನುವ ಆಟದಲ್ಲಿ ನಾಲ್ವರು ಆಟಗಾರರಿದ್ದಾರೆ. ಅವರಲ್ಲಿ ಪ್ರಕೃತಿ ಪರಮಾತ್ಮ ಒಂದುಕಡೆ, ಆತ್ಮ ಜೀವಾತ್ಮ ಮತ್ತೊಂದುಕಡೆ ಇದ್ದಾರೆ. ಈ ಆಟದಲ್ಲಿ ಒಂದುಕಡೆ ಇರುವ ಪ್ರಕೃತಿ ಪರಮಾತ್ಮರಲ್ಲಿ ಪ್ರಕೃತಿ ಮುಂದೆ ಇದೆ. ಪ್ರಕೃತಿ ಹಿಂದೆಯೇ ಪರಮಾತ್ಮ ಇದ್ದಾನೆ. ಆದುದರಿಂದ ಪ್ರಕೃತಿಯೇ ಕಾಣಿಸುತ್ತಿರುತ್ತದೆ, ಹಿಂದಿರುವ ಪರಮಾತ್ಮ ಕಾಣಿಸುವುದಿಲ್ಲ. ಇನ್ನೊಂದುಕಡೆ ಜೀವಾತ್ಮ ಆತ್ಮ ಜೋಡಿಯಾಗಿದ್ದಾರೆ. ಆಟದಲ್ಲಿ ಮುಂದಿರುವವನು ಜೀವಾತ್ಮ ಹಿಂದಿರುವವನು ಆತ್ಮ, ಆದ್ದರಿಂದ ಜೀವಾತ್ಮವೇ ಕಾಣಿಸುತ್ತದೆ ಆತ್ಮ ಕಾಣಿಸುವುದಿಲ್ಲ. ಈ ಜಗತ್ ಎನ್ನುವ ಆಟದಲ್ಲಿ ಮುಂದಿರುವವರು ಕಾಣಿಸುತ್ತಾರೆ, ಹಿಂದಿರುವವರು ಕಾಣಿಸುವುದಿಲ್ಲ.

ಪ್ರಕೃತಿ ಹಿಂದಿರುವ ಪರಮಾತ್ಮ ಕೆಲಸ ಮಾಡುವುದಿಲ್ಲ ಆದರೆ ದೇವರ ಸಂಕಲ್ಪದ ಪ್ರಕಾರ ಪ್ರಕೃತಿ ಕೆಲಸ ಮಾಡಬಲ್ಲದು. ಜೀವಿಯ ಹಿಂದಿರುವ ಆತ್ಮ ಜೀವಿಗಳಿಗೆಲ್ಲ ದೇವರಾಗಿದ್ದರೂ ಮತ್ತೊಂದು ವಿಧವಾಗಿ ಆತ್ಮವೇ ಎಲ್ಲಾ ಕೆಲಸಗಳು ಮಾಡುತ್ತಿದೆ. ಆತ್ಮ ಮಾಡುವ ಕೆಲಸಗಳೆಲ್ಲಾ ಜೀವಾತ್ಮ ಮಾಡುವಂತೆ ಹೊರಗೆ ಕಾಣಿಸಿದಾಗ ತನ್ನ ಹಿಂದೆ ಆತ್ಮವೇ ಕೆಲಸ ಮಾಡುತ್ತಿದ್ದಾನೆಂದು ತಿಳಿಯದ ಜೀವಾತ್ಮ ತಾನೇ ಎಲ್ಲಾ ಕೆಲಸಗಳು ಮಾಡುವಂತೆ ಭ್ರಮಿಸುತ್ತಿದ್ದಾನೆ. ಹಿಂದೆ ಆಡಿಸುವವನು ಆಡುವವನು ಆತ್ಮನಾದ ದೇವರೆಂದು ಜೀವಿಯು ತಿಳಿಯದೆಹೋಗಿದ್ದಾನೆ. ವಿಶ್ವವೆನ್ನುವ ಮೈದಾನದಲ್ಲಿ ಜಗತಿ ಎನ್ನುವ ನಾಟಕದಲ್ಲಿ ಪ್ರಕೃತಿಕಡೆ ತಾತನಾದ ದೇವರು ಇದ್ದಾನೆ. ಹಾಗೆಯೇ ಜೀವಿಯಕಡೆ ತಂದೆಯಾದ ದೇವರು ಇದ್ದಾನೆ. ಒಂದುಕಡೆ ಇರುವ ಪ್ರಕೃತಿ ಪರಮಾತ್ಮನಲ್ಲಿ ಪರಮಾತ್ಮನನ್ನು ಪ್ರಕೃತಿ ತನ್ನ ಪತಿಯಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಅದರ ಪ್ರಕಾರ ಪರಮಾತ್ಮಗೆ ಪ್ರಕೃತಿ ಪತ್ನಿಯಾಗಿ ಇದೆಯೆಂದು ಹೇಳಬಹುದು. ಮತ್ತೊಂದುಕಡೆ ಇರುವ ಆತ್ಮ ಜೀವಾತ್ಮಗಳಲ್ಲಿ ಜೀವಾತ್ಮ ಆತ್ಮವನ್ನು ತಂದೆಯಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಹಾಗೆ ಆತ್ಮ ಜೀವಾತ್ಮಗೆ ತಂದೆಯಾಗಿ ಇದ್ದಾನೆ. ಇದು ಯಾವಕಡೆ ಇರುವವರಿಗೆ ಆಕಡೆ ಬಾಂಧವ್ಯವನ್ನು ತಿಳಿಸಿದ್ದೇವೆ. ಈಗ ಆಕಡೆಯವರಿಗೆ,

ಈಕಡೆಯುವರು ಏನಾಗುತ್ತಾರೋ, ಈಕಡೆಯುವರಿಗೆ ಆಕಡೆಯುವರು ಏನಾಗುತ್ತಾರೋ ತಿಳಿದುಕೊಳ್ಳೋಣ.

ಪ್ರಕೃತಿ ಕಡೆಯಿಂದ ಎರಡನೆ ಕಡೆ ಇರುವ ಜೀವಾತ್ಮ ಪ್ರಕೃತಿಗೆ ಮಗ ಆಗಬೇಕು. ಹಾಗೆಯೇ ಪರಮಾತ್ಮಗೆ ಆತ್ಮ ಕುಮಾರನು ಆಗುತ್ತಾನೆ. ತಂದೆಯಾದ ಪರಮಾತ್ಮನಿಗೆ ಇಷ್ಟವಾದ ಕುಮಾರನು ಆತ್ಮವಾಗಿದ್ದು, ಪ್ರಕೃತಿಗೆ ಇಷ್ಟವಾದ ಮಗ ಜೀವಾತ್ಮಯೆಂದು ತಿಳಿಯಬೇಕು. ಭಗವದ್ಗೀತೆ ಗುಣತ್ರಯ ವಿಭಾಗ ಯೋಗದಲ್ಲಿ ಮೂರು, ನಾಲ್ಕು ಶ್ಲೋಕಗಳಲ್ಲಿ ಇದೇ ವಿಷಯವನ್ನು ಹೇಳಿದ್ದಾರೆ ನೋಡಿರಿ. . .

**ಶ್ಲೋ 3. ಮಮ ಯೋನಿ ರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್।**
**ಸಂಭವ ಸರ್ವಭೂತಾನಾಂ ತತೋ ಭವತಿ ಭಾರತ ॥**
**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ :– ಈ ಅಚೇತನ ಪ್ರಕೃತಿ ನನಗೆ ಪತ್ನಿಯಾಗಿ ಇರುವಾಗ, ಅದಕ್ಕೆ ನಾನು ಬೀಜದಾತನಾದ ಪತಿಯಾಗಿದ್ದೇನೆ. ನಮ್ಮ ಇಬ್ಬರಿಗು ಸಕಲ ಜೀವರಾಶಿಗಳು ಉದ್ಭವಿಸುತ್ತಿವೆ.**

**ಶ್ಲೋ॥ 4. ಸರ್ವಯೋನಿಷು ಕೌಂತೇಯ। ಮೂರ್ತಯಃ ಸಂಭವಂತಿ ಯಾಃ।**
**ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ ॥**
**(ಪ್ರಕೃತಿ,ಪರಮಾತ್ಮ)**

**ಭಾವಾರ್ಥ :– ಅನೇಕ ಗರ್ಭಗಳಲ್ಲಿ ಹುಟ್ಟುತ್ತಿರುವ ಸಕಲ ಜೀವರಾಶಿಗಳಿಗು ತಾಯಿ ಪ್ರಕೃತಿಯಾಗಿದ್ದು, ಬೀಜದಾತನಾಗಿ ನಾನು ತಂದೆಯಾಗಿ ಇದ್ದೇನೆ ಎಂದು ತಿಳಿಯಿರಿ.**

ಈ ಎರಡು ಶ್ಲೋಕಗಳಿಂದ ಸಕಲ ಜೀವಿಗಳಿಗೆ ತಂದೆ ತಾಯಿ, ಪರಮಾತ್ಮ ಪ್ರಕೃತಿಯೆಂದು ತಿಳಿದುಹೋಗುತ್ತಿದೆ. ಆದರೇ ಪ್ರಕೃತಿಯಾದ ತಾಯಿ

ಹೋಲಿಕೆಗಳು, ತಾಯಿ ಲಕ್ಷಣಗಳು ಜೀವಾತ್ಮನಿಗೆ ಹೆಚ್ಚಾಗಿ ಇರುವುದರಿಂದ ಪ್ರಕೃತಿ ಮಾತಿಗೆ ಇಷ್ಟವಾದ ಮಗ ಜೀವಾತ್ಮಯೆಂದು ಹೇಳಬಹುದು. ಹಾಗೆ ಪರಮಾತ್ಮ ಲಕ್ಷಣಗಳು, ಹೋಲಿಕೆಗಳು ಆತ್ಮಗೆ ಹೆಚ್ಚಾಗಿರುವುದರಿಂದ ಪರಮಾತ್ಮನಿಗೆ ಇಷ್ಟವಾದ ಮಗ ಆತ್ಮಯೆಂದು ಹೇಳಬಹುದು. ಆತ್ಮ ತನ್ನ ತಂದೆ ಪರಮಾತ್ಮಯೆಂದು ಹೇಳುತ್ತಿದೆ. ಆದರೇ ಜೀವಾತ್ಮದ ತಂದೆ ಆತ್ಮಯೆಂದು ತಿಳಿದಿಲ್ಲ. ತಾಯಿ ಪ್ರಕೃತಿಯೆಂದು ತಿಳಿದಿದೆ. ಆದ್ದರಿಂದ ತನ್ನ ತಂದೆಯನ್ನು ಕುರಿತು ತಿಳಿಯದವನಾಗಿ ಇದ್ದಾನೆ. ಕೇವಲ ತಾಯಿ ಪ್ರಕೃತಿಯೆಂದು ಮಾತ್ರ ಗೊತ್ತು. ಇದು ಪ್ರಸ್ತುತ ಪ್ರಪಂಚದಲ್ಲಿ ಆತ್ಮ, ಪರಮಾತ್ಮಗಳಿಗೆ ಜೀವಾತ್ಮ ಪ್ರಕೃತಿಗೆ ಇರುವ ಸಬಂಧವೆಂದು ತಿಳಿದಿದೆ. ಇದೆಲ್ಲವೂ ಪ್ರಥಮ ದೈವಗ್ರಂಥವಾದ ಭಗವದ್ಗೀತೆ ಮೂಲಕ ತಿಳಿಯಲ್ಪಡುವ ಜ್ಞಾನ. ಅದೇ ಭಗವದ್ಗೀತೆಯಲ್ಲಿನ ಅಕ್ಷರ ಪರಬ್ರಹ್ಮಯೋಗದಲ್ಲಿನ ಜ್ಞಾನದಿಂದ ಮತ್ತು ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗ ಎನ್ನುವ ಅಧ್ಯಾಯದಲ್ಲಿನ ಜ್ಞಾನದಿಂದ ತಿಳಿಯಲ್ಪಡುವ ಪ್ರಕೃತಿಯನ್ನು ಪರಮಾತ್ಮನನ್ನು, ಆತ್ಮನನ್ನು ಜೀವಾತ್ಮನನ್ನು ನಾಲ್ವರನ್ನು ಸೇರಿಸಿ ಒಂದು ಚಿತ್ರವಾಗಿ ತೋರಿಸಬಹುದು. ವಿಶ್ವ ಎನ್ನುವ ವೇದಿಕೆ ಮೇಲೆ ಜಗತ್ತು ಎನ್ನುವ ನಾಟಕದಲ್ಲಿ ಪಾತ್ರಗಳು, ಪಾತ್ರಧಾರರು ತಿಳಿದಿದ್ದಾರೆ ಅಲ್ಲವೆ! ಅದು ಅರ್ಥವಾಗುವುದಕ್ಕೆ ಮನುಷ್ಯನ ಶರೀರದಲ್ಲಿ ತಿಳಿಯಲ್ಪಟ್ಟ ಜ್ಞಾನದ ಪ್ರಕಾರ ಚಿತ್ರಿಸಿಕೊಂಡು ನೋಡಿದರು ಅದು ಜ್ಞಾನದೊಂದಿಗೆ ಸಮಾನವಾಗಿ ಕಾಣಿಸುತ್ತದೆ. ಮೂರು ಆತ್ಮಗಳು, ಒಂದು ಪ್ರಕೃತಿಯನ್ನು ಚಿತ್ರಿಸಿ ತೋರಿಸಬಹುದು. ಆ ಚಿತ್ರವನ್ನು "ದೇವರ ಚಿಹ್ನೆ" ಎಂದು ಹೇಳಬಹುದು. ದೇವರ ಚಿಹ್ನೆಯನ್ನೇ "ದೇವರ ಗುರುತು", "ದೇವರ ಮುದ್ರೆ" ಎಂದೂ ಸಹಾ ಹೇಳಬಹುದು.

ಗತದಲ್ಲಿ **'ದೇವರ ಚಿಹ್ನೆ'** ಎನ್ನುವ ಗ್ರಂಥವನ್ನು ಬರೆದಿದ್ದೇವೆ. ಅದರಲ್ಲಿ ಮೂರು ಆತ್ಮಗಳನ್ನು ಒಂದು ಪ್ರಕೃತಿಯನ್ನು ಚಿತ್ರಿಸಿ ತೋರಿಸಿದ್ದೇವೆ. ಆ ಚಿತ್ರ ಈದಿನ ಕಳೆದ ನಲವತ್ತು ವರ್ಷಗಳಿಂದ ಅರ್ಥವಾಗುವಂತೆ ಚಿತ್ರಪಟವಾಗಿ ಹೇಳುತ್ತಿದ್ದೇವೆ, ತೋರಿಸುತ್ತಿದ್ದೇವೆ. ನಾನು ಎರಡು ವರ್ಷಗಳ ಕೆಳಗೆ 'ದೇವರ

ಚಿಹ್ನೆ' ಎನ್ನುವ ಹೆಸರಿನಿಂದ ಬರೆದ ಗ್ರಂಥದಲ್ಲಿ 'ದೇವರ ಚಿಹ್ನೆ' ಎನ್ನುವ ಚಿತ್ರಪಟ ಎಲ್ಲರಿಗೂ ಹೊಸದಾಗಿ ಕಾಣಿಸಿದೆ. ಆದರೂ ಕೆಲವರಿಗೆ ಅದರಲ್ಲಿ ಒಳಗೊಂಡಿರುವ ಸಾರಾಂಶ ಮಹೋನ್ನತವಾಗಿ ಕಾಣಿಸಿದೆ. 'ದೇವರ ಚಿಹ್ನೆ', 'ದೇವರ ಮುದ್ರೆ' ಎರಡೂ ಒಂದೇಯೆಂದು ನಾವು ಬಹಳಸಲ ಹೇಳಿದ್ದೇವೆ. ದೇವರ ಚಿಹ್ನೆ ಎಂದರೇ ದೇವರಿಗೆ ಇದ್ದಷ್ಟು ಗೌರವವುಳ್ಳದ್ದು ಎಂದು ಅರ್ಥ. ದೇವರ ಮುದ್ರೆ ಅಥವಾ ದೇವರ ಚಿಹ್ನೆಯಲ್ಲಿ ದೇವರ ನಾಲ್ಕು ಭಾಗಗಳು ಮತ್ತು ಅದಕ್ಕೆ ಅನುಬಂಧವಾದ ಕರ್ಮ, ಗುಣಗಳು, ಕಾಲ ಎಲ್ಲವೂ ತಿಳಿಯಲ್ಪಡುವಂತೆ ಇರುತ್ತದೆ.

ದೇವರ ಜಗನ್ನಾಟಕದಲ್ಲಿ ದೇವರು ಪ್ರಕೃತಿ ಒಂದುಕಡೆಯಾದರೆ, ಆತ್ಮ ಜೀವಾತ್ಮ ಎರಡು ಮತ್ತೊಂದುಕಡೆ ಇವೆಯೆಂದು ಹೇಳಿಕೊಂಡಿದ್ದೇವೆ, ದೇವರಕಡೆ ದೇವರು ಕಾಣಿಸಲಿಲ್ಲ ಪ್ರಕೃತಿ ಕಾಣಿಸುತ್ತಿದೆಯೆಂದು, ಆತ್ಮಕಡೆ ಆತ್ಮ ಕಾಣಿಸುವುದಿಲ್ಲ ಜೀವಾತ್ಮ ಇರುವಂತೆ ತಿಳಿಯುತ್ತಿದೆ. ಈ ವಿಧವಾಗಿ ವಿಶ್ವವೇದಿಕೆ ಮೇಲೆ ಜಗತ್ ನಾಟಕ ಒಂದು ಆಟದಂತೆ ಇದೆ. ಈ ಆಟದಲ್ಲಿ ಎರಡು ಕಡೆಯಲ್ಲಿ ಅಧಿಪತಿಗಳಿದ್ದಾರೆ. ಪ್ರಕೃತಿಕಡೆ ಪರಮಾತ್ಮ ಅಧಿಪತಿಯಾಗಿದ್ದು, ಜೀವಾತ್ಮಕಡೆ ಆತ್ಮ ಅಧಿಪತಿಯಾಗಿದೆ. ಪರಮಾತ್ಮ ಭಾಗದಲ್ಲಿ ಪ್ರಕೃತಿ ಇರುವಾಗ, ಈಗ ನೀನು ಎಂದರೇ ಜೀವಾತ್ಮನು ಆತ್ಮಕಡೆ ಇದ್ದೀಯಾ. ನಿನಗೆ ಅಧಿಪತಿಯಾಗಿ ನಿನ್ನ ಕಡೆ ಆತ್ಮವಿದೆ. ಆಕಡೆ ಇರುವ ಪರಮಾತ್ಮ ವಿಷಯ ಜೀವಿಗೆ ಸ್ವಲ್ಪವೂ ತಿಳಿದಿಲ್ಲ. ಜೀವಿಗೆ (ನಿನಗೆ) ಎದುರುಗಡೆಯಿರುವ ಪ್ರಕೃತಿ ಮಾತ್ರ ಕಾಣಿಸುತ್ತಿದೆ. ಹಾಗೇ ನಿನ್ನ ಹಿಂದೆ (ಜೀವಿಗೆ ಹಿಂದೆ) ಇರುವ ಆತ್ಮ ಕೂಡಾ ಜೀವಿಗೆ ಕಾಣಿಸದಿರುವುದರಿಂದ ಒಂದುಕಡೆ ನಾನೇ ಇದ್ದೇನೆಂದು ಜೀವಿಯು ಅಂದುಕೊಳ್ಳುತ್ತಿದ್ದಾನೆ. ಅತ್ತ ಪ್ರಕೃತಿ ಹಿಂದಿರುವ ಪರಮಾತ್ಮ ತಿಳಿಯಲಿಲ್ಲ. ತನ್ನಕಡೆ ತನ್ನ ಹಿಂದಿರುವ ಆತ್ಮ ಕಾಣಿಸಲಿಲ್ಲ. ಎದುರುಗಡೆ ಪ್ರಕೃತಿ ಜಢವಾಗಿ ಕಾಣಿಸುತ್ತಿದೆ. ಇತ್ತ ತಾನು ಒಬ್ಬನೇ ಕೆಲಸ ಮಾಡುವಂತೆ ಜೀವಿಯು ಅಂದುಕೊಳ್ಳುತ್ತಿದ್ದಾನೆ. ತನ್ನಕಡೆ ಎಲ್ಲಾ ಕಾರ್ಯಗಳನ್ನು ಆತ್ಮವೇ ಮಾಡುತ್ತಿದ್ದಾ

ನೆಂದು ಜೀವಿಗೆ ತಿಳಿಯುತ್ತಿಲ್ಲ. ತನ್ನ ಪ್ರಮೇಯ ಇಲ್ಲದೇ ಕೆಲಸಗಳು ನಡೆಯುತ್ತಿವೆಯೆಂದು, ಆತ್ಮವೇ ಎಲ್ಲಾ ಮಾಡುತ್ತಿದೆಯೆಂದು ತಿಳಿಯದಿರುವು ದರಿಂದ ತನಗೆ ಸಂಬಂಧವಿಲ್ಲದ ಕಾರ್ಯಗಳೆಲ್ಲವನ್ನು ತಾನೇ ಮಾಡಿದಂತೆ ಅಂದುಕೊಳ್ಳುತ್ತಿದ್ದಾನೆ.

ಜಗನ್ನಾಟಕ ಎನ್ನುವ ಆಟದಲ್ಲಿ ಪಕ್ಷ, ಪ್ರತಿಪಕ್ಷ ಎನ್ನುವ ಎರಡು ಕಡೆಗಳಲ್ಲಿ ಒಂದುಕಡೆ ಪರಮಾತ್ಮ ಪ್ರಕೃತಿ ಇದೆಯೆಂದು ಹೇಳಿಕೊಂಡಿದ್ದೇವೆ. ಪ್ರಕೃತಿ ಹಿಂದಿರುವ ದೇವರು ಎಂದರೇ ಪರಮಾತ್ಮ ಯಾವುದೆ ಕೆಲಸ ಮಾಡದವನಾಗಿ ಇದ್ದಾನೆ. ಆ ಕಡೆ ಇರುವ ಪ್ರಕೃತಿ ಗ್ರಹಗಳು, ಭೂತಗಳ ಮೂಲಕ ಕೆಲಸ ಮಾಡುತ್ತಿದೆ. ಪರಮಾತ್ಮ ಕೆಲಸ ಮಾಡದವನಾಗಿ ಅಗತ್ಯವಾದಾಗ ಪ್ರಕೃತಿಗೆ ಸೂಚನೆಗಳು ಕೊಡುವವನಾಗಿದ್ದಾನೆ. ಪ್ರಪಂಚದಲ್ಲಿ ಮಾನವರಿಗೆ, ಪ್ರಾಣಿಗಳಿಗೆ ಸಕಲ ಜೀವರಾಶಿಗಳಿಗು ಆತ್ಮವೇ ದೇವರಾಗಿದ್ದಾನೆ. ಆತ್ಮವನ್ನು ದೇವರಾಗಿರುವಂತೆ ಪರಮಾತ್ಮನೇ ನಿರ್ಣಯಿಸಿ ಆತ್ಮಗೆ ಅಧಿಕಾರವನ್ನು ಕೊಟ್ಟಿದ್ದಾನೆ. ಆದ್ದರಿಂದ ಮೂರು ದೈವಗ್ರಂಥಗಳಲ್ಲಿಯೂ ಆತ್ಮವನ್ನೇ ದೇವರಾಗಿ ವರ್ಣಿಸಿದ್ದಾರೆ. ಈದಿನ ಮುಸ್ಲಿಮ್‌ರು **ಅಲ್ಲಾಹ್** ಎಂದು ಹೇಳುವುದು, ಕ್ರೈಸ್ಥರು **ಯೋಹೋವಾ** ಎಂದು ಹೇಳುವುದು, ಹಿಂದೂಗಳು **ದೇವರು** ಎಂದು ಹೇಳುವುದು ಆತ್ಮವಾದ ದೇವರನ್ನೇ. ಇದೆಲ್ಲವೂ ತಿಳಿಯುವುದಕ್ಕೆ ಬರೆದುಕೊಂಡ ಚಿತ್ರಪಟವನ್ನು ದೇವರ ಚಿಹ್ನೆ ಅಥವಾ ದೇವರ ಮುದ್ರೆ ಎಂದು ಕರೆಯುತ್ತಿದ್ದೇವೆ. ದೇವರ ಮುದ್ರೆಯನ್ನು ವಿವರವಾಗಿ ತಿಳಿಯಲ್ಪಟ್ಟರೆ ದೇವರಾದ ಆತ್ಮ ವಿಷಯ ಜೀವಿಯ ವಿಷಯ ತಿಳಿಯಬಹುದು. ಹಾಗೆ ಮತ್ತೊಂದುಕಡೆ ಇರುವ ಪ್ರಕೃತಿ ಪರಮಾತ್ಮರ ವಿಷಯವನ್ನು ಕೂಡಾ ತಿಳಿಯಬಹುದು. ಆದುದರಿಂದ ದೇವರ ಮುದ್ರೆಯನ್ನು ತಿಳಿಯುವುದಕ್ಕೆ ಪ್ರಯತ್ನಿಸೋಣ.

ಗತದಲ್ಲಿ **"ದೇವರ ಚಿಹ್ನೆ"** ಎನ್ನುವ ಗ್ರಂಥವನ್ನು ಬರೆದಿದ್ದೀರ ಅಲ್ಲವೆ! ಅದರಲ್ಲಿನ ಜ್ಞಾನವನ್ನು ಸಂಪೂರ್ಣವಾಗಿ ಹೇಳಿದ್ದೀರಲ್ಲವೆ! ಎಂದು ಈಗ ಪುನಃ ಹೊಸದಾಗಿ ಹೇಳುವುದೇನನಿದೆ? ಎಂದು ಕೆಲವರು ಕೇಳಬಹುದು.

ಅದಕ್ಕೆ ನನ್ನ ಸಮಾಧಾನ ಏನೆಂದರೆ! ನಿನ್ನ ಶರೀರದಲ್ಲಿನ ಆತ್ಮವೇ ನಿನಗು, ಸಕಲ ಜೀವಿಗಳಿಗು ಮಾನವರೆಲ್ಲರಿಗೂ ದೇವರಾಗಿದೆ. ಅಷ್ಟೇ ಅಲ್ಲದೆ. ಅದೇ ಆತ್ಮವೇ ಮನುಷ್ಯರಿಗೆ ಕಾರ್ಯಕರ್ತನಾಗಿಯೂ ಸಹ ಇದೆ. ಆತ್ಮ ನಿನಗೆ ಯಜಮಾನನಾಗಿ (ಈಶ್ವರನಾಗಿ) ಅಧಿಪತಿಯಾಗಿದೆ, ಅದೇ ಆತ್ಮವೇ ಇನ್ನೊಂದು ವಿಧವಾಗಿ ನಿನಗೆ ಸೇವಕನಾಗಿ, ಕಾರ್ಯಕರ್ತನಾಗಿ, ಕೆಲಸದವನಾಗಿ ಇದೆ. ಆತ್ಮ ಅಧಿಪತಿಯಾಗಿದ್ದು ಸೇವಕನಾಗಿರುವುದು ಆಶ್ಚರ್ಯವೇ ಆದರೂ ವಾಸ್ತವವಾಗಿ ನಡೆಯುತ್ತಿದೆ, ಇರುವುದು ಅಷ್ಟೇಯೆಂದು ತಿಳಿಯಬೇಕು. ಆತ್ಮ, ಜೀವಾತ್ಮ ಕಡೆಯಿಂದ ತಿಳಿದುಕೊಂಡರೆ ಕಾಲ, ಕರ್ಮವನ್ನು ಅನುಸರಿಸಿ ಆತ್ಮ ದೇವರಾಗಿದೆ. ಹಾಗೆಯೇ ಕರ್ಮವನ್ನು ಆಚರಿಸುತ್ತಾ ಆತ್ಮ ಸೇವಕನಾಗಿ ಇದೆಯೆಂದು ತಿಳಿಯುವಂತೆ, ಆ ವಿಧವಾಗಿ ಆತ್ಮಜ್ಞಾನ ಅರ್ಥವಾಗುವಂತೆ ಗೀಚಿದ ಚಿತ್ರವೇ ದೇವರ ಚಿಹ್ನೆ. **'ದೇವರ ಚಿಹ್ನೆ'** ಎನ್ನುವ ಗ್ರಂಥದಲ್ಲಿ ಶರೀರ ಅಂತರ್ಭಾಗದಲ್ಲಿ ಏಳು ಸ್ಥಾನಗಳು ಅಥವಾ ಖುರಾನ್‌ನಲ್ಲಿ ಹೇಳಿದ ಏಳು ಆಕಾಶಗಳು ಮೊದಲುಗೊಂಡು ಕರ್ಮವನ್ನು ಕರ್ಮಚಕ್ರವಾಗಿ, ಕಾಲವನ್ನು ಕಾಲಚಕ್ರವಾಗಿ, ಆತ್ಮವನ್ನು ಬ್ರಹ್ಮನಾಡಿಯಾಗಿ, ಪರಮಾತ್ಮನನ್ನು ಏಳನೆ ಸ್ಥಾನದಲ್ಲಿರುವ ಬ್ರಹ್ಮಚಕ್ರವಾಗಿ, ಜೀವಿಯು ಜೀವಿಗೆ ಅಂಟಿಕೊಂಡಿರುವ ಗುಣಗಳನ್ನು ಗುಣಚಕ್ರವಾಗಿ ತೋರಿಸುವುದು ನಡೆದಿದೆ. ಈ ನಾಲ್ಕು ಚಕ್ರಗಳ ಸಮುದಾಯವನ್ನು ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳಾಗಿ ಗೀಚಿ ತೋರಿಸುವುದಾಗಿದೆ. ಹಾಗೆ ತೋರಿಸಿದ ಚಿತ್ರಪಟವನ್ನು ದೇವರ ಚಿಹ್ನೆಯೆಂದು ಹೆಸರಿಟ್ಟು ಹೇಳುವುದಾಗಿದೆ. **"ದೇವರ ಚಿಹ್ನೆ"** ಎನ್ನುವ ಹೆಸರಿನಿಂದ ಬರೆದ ಗ್ರಂಥದಲ್ಲಿ ನಾಲ್ಕು ಚಕ್ರಗಳ ವಿವರ ಸಂಪೂರ್ಣವಾಗಿ ಇದೆ. ನಾಲ್ಕು ಚಕ್ರಗಳ ವಿವರದಲ್ಲಿ ಆತ್ಮಸಂಬಂಧವಾದ ಮೂರು ಆತ್ಮಗಳಿವೆ. ಹಾಗೇ ಪ್ರಕೃತಿ ಸಂಬಂಧವಾದ ಕಾಲ, ಕರ್ಮ, ಗುಣಗಳ ವಿವರಗಳು ಇವೆ. ಬ್ರಹ್ಮನಾಡಿಯಲ್ಲಿ ಆತ್ಮ ವಿವರವನ್ನು ಹೇಳುವುದಲ್ಲದೆ, ಏಳು ಆಕಾಶಗಳಾಗಿ ಬ್ರಹ್ಮನಾಡಿ ಇದೆಯೆಂದು ಅದನ್ನೇ ಏಳು ನಾಡಿಕೇಂದ್ರಗಳಾಗಿ ಕೂಡಾ ಹೇಳುತ್ತಿದ್ದೇವೆಂದು ವಿವರಿಸಿ ಹೇಳುವುದಾಗಿದೆ. ಈ ನಾಲ್ಕು ಚಕ್ರಗಳ ಚಿತ್ರಪಟ ಎಂದರೇ ದೇವರ ಚಿಹ್ನೆ ಎನ್ನುವುದು ಸೃಷ್ಟಿ

ಆದಿಯಿಂದ ಇಲ್ಲ. ಈಗಲೇ ಹೊಸದಾಗಿ ಹೇಳುವುದರಿಂದ ನಂಬುವುದಕ್ಕೆ ಸಾಧ್ಯವಿಲ್ಲದಂತಿದೆ. ಆದ್ದರಿಂದ ಕೆಲವರು ಇದಕ್ಕೆ ಶಾಸ್ತ್ರಾಧಾರವಿದೆಯಾ? ಎಂದು ಕೇಳಬಹುದು. ಇದಕ್ಕೆ ನಮ್ಮ ಸಮಾಧಾನ ಏನೆಂದರೇ ದೈವಗ್ರಂಥವಾದ ಖುರ್‌ಆನ್‌ನಲ್ಲಿ ಸೂರಾ 5 ಆಯತ್ 2ರಲ್ಲಿ ದೇವರ ಚಿಹ್ನೆಗಳನ್ನು ಕುರಿತು ಮಹಾಜ್ಞಾನಿ ಜಿಬ್ರಯೇಲ್ ಹೇಳಿದ್ದಾರೆ. ಅಲ್ಲಿ ಒಂದುಕಡೆಯೇ ಅಲ್ಲದೆ 22ನೇ ಸೂರಾದಲ್ಲಿ 32ನೇ ಆಯತ್‌ನಲ್ಲಿ ಕೂಡಾ ಹೇಳಿದ್ದಾರೆ ಎಂದು ಇದಕ್ಕು ಮೊದಲು ಬರೆದ **"ದೇವರ ಚಿಹ್ನೆ"** ಗ್ರಂಥದಲ್ಲಿಯೇ ಬರೆದಿದ್ದೇನೆ. ದೇವರ ಚಿಹ್ನೆಯನ್ನು ಕುರಿತು ದೈವಗ್ರಂಥದಲ್ಲಿ ಹೇಳಿದ್ದರೂ ಅದನ್ನು ಮುಸ್ಲಿಮ್‌ರಾಗಲಿ, ಇತರರಾಗಲಿ ಗ್ರಹಿಸಿಕೊಳ್ಳಲಿಲ್ಲವೆಂದು ಹೇಳಿದ್ದೇವೆ. ಎಲ್ಲರೂ ಗ್ರಹಿಸಿಕೊಳ್ಳುವಂತೆ ನಾವು ಬರೆದ "ದೇವರ ಚಿಹ್ನೆ" ಗ್ರಂಥದಲ್ಲಿ ಬರೆದಿದ್ದೇವೆ. ಅಂತಿಮ ದೈವಗ್ರಂಥದಲ್ಲಿ ಬರೆದಿರುವುದು ನೋಡೋಣ. (5-2) **"ವಿಶ್ವಾಸಿಸಿದ ಓ ಪ್ರಜೆಗಳೇ! ಅಲ್ಲಾಹ್ ಚಿಹ್ನೆಗಳನ್ನಾಗಲಿ, ಯಾವ ನಿಷಿದ್ಧ ಮಾಸವನ್ನಾಗಲಿ ಅಗೌರವಪಡಿಸಬೇಡಿ"** (22-32) **"ಇದು ಕೂಡಾ ತಿಳಿದುಕೊಳ್ಳಿ. ಅಲ್ಲಾಹ್ ಚಿಹ್ನೆಗಳನ್ನು ಯಾರಾದರೂ ಗೌರವಿಸುತ್ತಿದ್ದಾರೆಂದರೇ ಅದು ಅವರ ಹೃದಯಗಳಲ್ಲಿನ ಭಕ್ತಿ ಭಾವನೆಯಿಂದಲೇ ಎಂದು ತಿಳಿಯಿರಿ."** ಈ ವಾಕ್ಯಗಳನ್ನು ಅನುಸರಿಸಿ, ಈ ವಾಕ್ಯಗಳನ್ನು ಆಧಾರವಾಗಿ ಮಾಡಿಕೊಂಡು "ದೇವರ ಚಿಹ್ನೆ" ಎನ್ನುವ ಗ್ರಂಥದಲ್ಲಿ ದೇವರ ಚಿಹ್ನೆಗಳ ಚಿತ್ರಪಟಗಳನ್ನು ಗೀಚಿ ತೋರಿಸಿದ್ದೇನೆ. ವಾಸ್ತವ ಹೇಳಿದರೆ ನಾನು ಖುರ್‌ಆನ್ ಗ್ರಂಥದಲ್ಲಿ ಈ ವಾಕ್ಯಗಳನ್ನು ನೋಡಿರುವುದು ಬಹುಶಃ ಆರು ತಿಂಗಳ ಕೆಳಗಾದರೇ, ಈ ಚಿಹ್ನೆಗಳ ಗೊಂಬೆಗಳನ್ನು ಬರೆದಿರುವುದು ಸುಮಾರು 40 ವರ್ಷಗಳ ಕೆಳಗೆ. ಈ ವಾಕ್ಯಗಳನ್ನು ನೋಡದೇ ಆಗ ಹೇಗೆ ಬರೆದಿದ್ದೀರ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಪ್ರಥಮ ದೈವಗ್ರಂಥದಲ್ಲಿ ಅಕ್ಷರ ಪರಬ್ರಹ್ಮ ಯೋಗ ಎನ್ನುವ ಅಧ್ಯಾಯದಲ್ಲಿ ಸೂಕ್ಷ್ಮವಾಗಿ ಪರೋಕ್ಷವಾಗಿ ದೇವರ ಚಿಹ್ನೆಯನ್ನು ಕುರಿತು ಕಾಣಿಸಿದಾಗ, ಅಲ್ಲಿ ತಿಳಿದಿರುವುದನ್ನು ನನ್ನ ಮೊದಲ ಗ್ರಂಥವಾದ **"ಪ್ರಬೋಧ"** ಎನ್ನುವ ಗ್ರಂಥದಲ್ಲಿ 1980ನೇ ಸಂ॥ದಲ್ಲಿ

ಮುದ್ರಿಸುವುದು ನಡೆದಿದೆ. ಇದನ್ನನುಸರಿಸಿ 36 ವರ್ಷಗಳ ಕೆಳಗೇ "ದೇವರ ಚಿಹ್ನೆ" ಎನ್ನುವ ಚಿತ್ರವೊಂದರ ನಮೂನೆ ಮುದ್ರಣವಾಗಿದೆಯೆಂದು ತಿಳಿಯುತ್ತಿದೆ.

ಅದೇ ಚಿತ್ರದಿಂದ ಅದೇ ಹೆಸರಿನಿಂದ ಸುಮಾರು ವರ್ಷದ ಕೆಳಗೆ ಗ್ರಂಥವನ್ನು ಬರೆಯುವುದು ನಡೆದಿದೆ. ಆ ಗ್ರಂಥದಲ್ಲಿನ ಒಂದು ವಿಷಯವನ್ನು ಕೂಡಾ ಇಲ್ಲಿಯವರೆಗು ಈ ಗ್ರಂಥದಲ್ಲಿ ಬರೆಯಲಿಲ್ಲ. ಇಲ್ಲಿಯವರೆಗು ಈ ಗ್ರಂಥದಲ್ಲಿ ಬರೆದಿರುವುದು ಆ ಗ್ರಂಥದಲ್ಲಿನ ವಿಷಯಕ್ಕಿಂತ ಬೇರೆಯಾಗಿದೆ. ಅಲ್ಲಿ ಬರೆದ ವಿಧಾನ ಬೇರೆ, ಇಲ್ಲಿ ಬರೆದ ವಿಧಾನ ಬೇರೆಯಾಗಿದೆ. ಆ ಗ್ರಂಥವನ್ನು ಒಂದುಸಲ ಓದಿನೋಡಿರಿ. ಅಲ್ಲಿ ದೇವರ ಚಿಹ್ನೆಯನ್ನು ತಂದೆಯಾದ ದೇವರಿಗೆ ಸಂಬಂಧಿಸಿ ವರ್ಣಿಸಿ ಬರೆಯುವುದು ನಡೆದಿದೆ. ಈಗ **"ದೇವರ ಮುದ್ರೆ"** ಎನ್ನುವ ಹೆಸರಿನಿಂದ ಬರೆದ ಸಮಾಚಾರವೆಲ್ಲವೂ ತಾತನಾದ ದೇವರನ್ನು ಕುರಿತು ಬರೆದಿರುವುದಾಗಿದೆ. ತಂದೆಯಾದ ದೇವರನ್ನು ಎಲ್ಲರೂ ಆರಾಧಿಸುವುದರಿಂದ, ನಾವು ತಿಳಿದ ಜ್ಞಾನವೆಲ್ಲವೂ ತಂದೆಯಾದ ದೇವರದ್ದೇ ಆಗಿರುವುದರಿಂದ, ನಾವು ಮೊದಲು ತಂದೆಯಾದ ದೇವರ ವಿಧಾನ ತಿಳಿಯುವಂತೆ ದೇವರ ಚಿಹ್ನೆಯನ್ನು ಚಿತ್ರಿಸುವುದು, ಆ ಚಿತ್ರವನ್ನು ತಂದೆಯಾದ ದೇವರಿಗೆ ಸಂಬಂಧಿಸಿದ ಕಾಲ, ಕರ್ಮಗಳನ್ನು, ಆತನ ಕೆಲಸ ವಿಧಾನವನ್ನು ತಿಳಿಯುವಂತೆ ವಿವರಿಸಿ ಹೇಳುವುದು ನಡೆದಿದೆ. ಆ ಗ್ರಂಥದಲ್ಲಿ ದೇವರ ಚಿಹ್ನೆವೊಂದರ ಚಿತ್ರಪಟವನ್ನು ಅಲ್ಲಿ ಹೇಳಿದ ಅರ್ಥವನ್ನು (ವಿವರವನ್ನು) ಆ ಗ್ರಂಥದಲ್ಲಿಂದ ಶೇಕರಿಸಿ ಇಲ್ಲಿ ನಿಮಗೆ ತೋರಿಸುವುದು ನಡೆಯುತ್ತಿದೆ. ಇದು ನೋಡಿದ ನಂತರ ತಾತನಾದ ದೇವರನ್ನು ಕುರಿತಾದ ವಿವರವನ್ನು ಅದೇ ಚಿಹ್ನೆಯಿಂದ ತೋರಿಸುವುದು ನಡೆಯುತ್ತಿದೆ. ಈ ಗ್ರಂಥದಲ್ಲಿ ಹೇಳಿದ ಎರಡು ವಿಧಾನಗಳನ್ನು ಜಾಗ್ರತೆಯಾಗಿ ಗ್ರಹಿಸಬೇಕೆಂದು ತಿಳಿಸುತ್ತಿದ್ದೇನೆ.

ಈಗ **"ದೇವರ ಚಿಹ್ನೆ"** ಗ್ರಂಥದಲ್ಲಿ ನೋಡೋಣ. 29–44ನೇ ವಾಕ್ಯದಲ್ಲಿ **(29–44) "ಅಲ್ಲಾಹ್ ಭೂಮಿಯನ್ನು, ಆಕಾಶಗಳನ್ನು ಸತ್ಯಬದ್ಧವಾಗಿ ಸೃಷ್ಟಿಸಿದ್ದಾನೆ. ಆಕಾಶಗಳನ್ನು ಭೂಮಿಯನ್ನು ಪರಮಾರ್ಥದಿಂದ ಸೃಷ್ಟಿಸಿದ್ದಾನೆಂದು ತಿಳಿದರೇ**

**ಇದರಲ್ಲಿ ದೊಡ್ಡ ನಿದರ್ಶನ ದೊರೆಯುತ್ತದೆ"** ಎಂದು ಇದೆ. ಆದರೇ ಇದರಲ್ಲಿ 'ಭೂಮಿ, ಆಕಾಶಗಳನ್ನು' ಎಂದು ಹೇಳಿದಾಗ ಭೂಮಿ ಆಕಾಶ ಸ್ಥೂಲವಾದ ಕಣ್ಣಿಗೆ ಕಾಣಿಸುವ ವಿಷಯವೇ ಅಲ್ಲವೆ! ಎಂದು ಯಾರಾದರೂ ಅಂದುಕೊಳ್ಳುವ ಅವಕಾಶವಿದೆ. ಅಲ್ಲಿ ಹೇಳಿರುವುದು ಒಂದು ಆಕಾಶವನ್ನಲ್ಲ **'ಆಕಾಶಗಳು'** ಎಂದು ಹೇಳಿದ್ದಾನೆ. ನಮಗೆ 'ಆಕಾಶ' ಕಾಣಿಸುತ್ತಿದೆ ಆದರೆ, 'ಆಕಾಶಗಳು ' ಕಾಣಿಸಲಿಲ್ಲ. ಈ ಮಾತಿನಿಂದಲೇ ಇದರಲ್ಲಿ ಕಾಣಿಸದ ಜ್ಞಾನವಿದೆಯೆಂದು ತಿಳಿದುಹೋಗುತ್ತಿದೆ. ನಾವು ಚೆನ್ನಾಗಿ ಆಲೋಚಿಸಿದರೆ ಖುರಾನ್ ಗ್ರಂಥ ತೌರಾತ್ ಗ್ರಂಥವೊಂದರ ಆಧಾರದಿಂದ ಹೇಳಲ್ಪಟ್ಟಿದೆ. ಆ ವಿಷಯ ಖುರ್‌ಆನ್ ಗ್ರಂಥದಲ್ಲಿಯೇ ಇದೆ. ತೌರಾತ್ ಗ್ರಂಥವು ಖುರ್‌ಆನ್ ಗ್ರಂಥವನ್ನು ಧೃಡೀಕರಿಸುತ್ತಿದೆಯೆಂದು ಹೇಳಿದಾಗಲೇ ತೌರಾತ್ ಗ್ರಂಥದಲ್ಲಿನ ಜ್ಞಾನವೇ ಖುರಾನ್‌ನಲ್ಲಿ ಇದೆಯೆಂದು ತಿಳಿದುಹೋಗುತ್ತಿದೆ. ತೌರಾತ್ ಗ್ರಂಥದಲ್ಲಿ ಹೇಳಿದ ವಾಕ್ಯಗಳೆಲ್ಲವೂ ಶರೀರ ಅಂತರಂಗದಲ್ಲಿಯೇ ಹೇಳುವುದು ನಡೆದಿದೆ. ಕೊನೆಗೆ ದೇವರು ಮನುಷ್ಯನ ಶರೀರದಲ್ಲಿ ಕೂಡಾ ಇದ್ದಾನೆಂದು ಹೇಳುವುದಾಗಿದೆ. ಅದೇ ಜ್ಞಾನವನ್ನೇ ಖುರಾನ್‌ನಲ್ಲಿ ಹೇಳುವುದರಿಂದ ಖುರಾನ್‌ನಲ್ಲಿನ ಆಯತ್‌ಗಳು ಶರೀರದಲ್ಲಿ ಅಡಕವಾಗಿರುವ ಜ್ಞಾನವನ್ನೇ ಹೇಳಿವೆಯೆಂದು ತಿಳಿಯಬಹುದು. ಭಗವದ್ಗೀತೆ ಪ್ರಕಾರವಾದರೂ, ಖುರಾನ್ ಪ್ರಕಾರವಾದರೂ 29-44ರಲ್ಲಿ ಇರುವ ಜ್ಞಾನ ಸೂಕ್ಷ್ಮವಾದುದೆಂದು, ಶರೀರದಲ್ಲಿ ಅಡಕವಾಗಿರುವ ಜ್ಞಾನವೆಂದು ತಿಳಿದುಹೋಗುತ್ತಿದೆ. 'ಭೂಮಿ, ಆಕಾಶಗಳನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ದೇವರು ಸೃಷ್ಟಿಸಿದ್ದಾನೆ' ಎನ್ನುವುದು ಸತ್ಯವೇ ಆದರೂ ಮೊದಲು ಆಕಾಶಗಳನ್ನು ಕುರಿತು ತಿಳಿದುಕೊಳ್ಳಬೇಕು. ಆ ಪ್ರಯತ್ನದಲ್ಲಿ ಖುರಾನ್‌ನಲ್ಲಿ ಸಪ್ತ ಆಕಾಶಗಳೆಂದು ಬಹಳಕಡೆ ಹೇಳುವುದಾಗಿದೆ. ಅದನ್ನನುಸರಿಸಿ ಏಳು ಆಕಾಶಗಳಿವೆಯೆಂದು, ಏಳು ಆಕಾಶಗಳು ಹೊರಗಿನ ಪ್ರಪಂಚದಲ್ಲಿ ಇಲ್ಲವೆಂದು, ಒಳಗಿನ ಪ್ರಪಂಚವಾದ ಶರೀರದಲ್ಲಿಯೇ ಇವೆಯೆಂದು ಅರ್ಥ ಮಾಡಿಕೊಳ್ಳಬೇಕು. ಈ ಮಾತಿಗೆ ಮೂಲ ಭಗವದ್ಗೀತೆಯಲ್ಲಿರುವ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ ಆರನೇ ಶ್ಲೋಕದಲ್ಲಿ ಇದೆಯೆಂದು ತಿಳಿಯುತ್ತಿದೆ.

**"ಮಹರ್ಷಯ ಸಪ್ತ"** ಎನ್ನುವ ಪದವನ್ನು ತೆಗೆದುಕೊಂಡು ನೋಡಿದರೆ ನಮ್ಮ ಶರೀರದಲ್ಲಿರುವ ಏಳು ಆಕಾಶಗಳ ವಿವರ ತಿಳಿಯಬಲ್ಲದು.

ಸೂರಾ 29–44ನೇ ಆಯತ್ ಪ್ರಕಾರ ಏಳು ಆಕಾಶಗಳು ಹೊರಗೆ ಎಲ್ಲಿಯೂ ಇಲ್ಲ. ಆದರೇ ಏಳು ಆಕಾಶಗಳೆನ್ನುವ ವಿಧಾನ ಶರೀರದೊಳಗೆ ಇದೆ. ಶರೀರದೊಳಗೆ ತಲೆಯಿಂದ ಆರಂಭವಾಗಿ ಗುದಸ್ಥಾನದವರೆಗಿರುವ ಬೆನ್ನುಮೂಳೆಯಲ್ಲಿ ಬ್ರಹ್ಮನಾಡಿ (ಬೆನ್ನುಉರಿ) ಎನ್ನಲ್ಪಡುವ ದೊಡ್ಡ ನರ ಇದೆ. ಬ್ರಹ್ಮನಾಡಿ ಎನ್ನುವ ದೊಡ್ಡನರ ಮೆದುಳಿನಿಂದ ಹೊರಟು ಬ್ರಹ್ಮನಾಡಿಯಲ್ಲಿ ವ್ಯಾಪಿಸಿ ಸೊಂಟದ ಕೆಳಗೆ ಕೊನೆಯ ಮಣಿವರೆಗು ಇರುತ್ತದೆ. ಹಾಗೆ ವ್ಯಾಪಿಸಿರುವ ನರ ಒಟ್ಟು ಏಳು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಬ್ರಹ್ಮನಾಡಿಯ ಮೇಲ್ಭಾಗವಾದ ಮೆದುಳು ದೊಡ್ಡ ನಾಡಿಕೇಂದ್ರವಾಗಿದೆ. ಉಳಿದ ಆರು ಸ್ಥಾನಗಳಲ್ಲಿ ಬ್ರಹ್ಮನಾಡಿ ಎನ್ನಲ್ಪಡುವ ನರದಲ್ಲಿ ಉಳಿದ ಆರುಕಡೆ ಆರು ನಾಡಿಕೇಂದ್ರಗಳು ಇವೆ. ಒಟ್ಟು ಬ್ರಹ್ಮನಾಡಿ ಏಳು ನಾಡಿಕೇಂದ್ರಗಳಾಗಿ ವಿಭಜಿಸಲ್ಪಟ್ಟಿದೆ. ಈ ಏಳು ನಾಡಿಕೇಂದ್ರಗಳ ಮೂಲಕ ಶರೀರದಲ್ಲಿನ ಒಟ್ಟಾರೆ ಕೆಲಸಗಳು ನಡೆಯುವಂತೆ ಏಳು ಕೇಂದ್ರಗಳಿಂದ ಚಿಕ್ಕ ಚಿಕ್ಕ ನರಗಳು ಶರೀರವೆಲ್ಲ ವ್ಯಾಪಿಸಿವೆ. ಏಳು ನಾಡಿಕೇಂದ್ರಗಳಲ್ಲಿ ಆತ್ಮಶಕ್ತಿ ಇರುವಾಗ ಏಳನೆ ಕೇಂದ್ರದಲ್ಲಿ ಪರಮಾತ್ಮ ಶಕ್ತಿ (ದೇವರು) ನಿಲಯವಾಗಿದ್ದಾನೆ. ಈ ವಿಧವಾಗಿ ಒಂದು ಸಜೀವ ಶರೀರದಲ್ಲಿ ಏಳು ಆಕಾಶಗಳೆನ್ನುವ ಏಳು ನಾಡಿಕೇಂದ್ರಗಳು ಇವೆ, ಈ ಏಳು ನಾಡಿಕೇಂದ್ರಗಳನ್ನೇ ಏಳು ಆಕಾಶಗಳೆಂದು ಖುರಾನ್ ಗ್ರಂಥದಲ್ಲಿ ಅನೇಕಸಲ ಹೇಳುವುದಾಗಿದೆ. ಇದನ್ನು ಡಿಜೈನ್ ಮಾಡಿದವನು, ತಯಾರು ಮಾಡಿದವನು ಅಲ್ಲಾನೇ (ದೇವರೇ). ಆದ್ದರಿಂದ (29–44) ಆಯತ್‌ನಲ್ಲಿ **"ಅಲ್ಲಾಹ್ ಆಕಾಶಗಳನ್ನು ಭೂಮಿಯನ್ನು ಸತ್ಯಬದ್ಧವಾಗಿ ಸೃಷ್ಟಿಸಿದ್ದಾನೆ"** ಎಂದು ಹೇಳಿದ್ದಾನೆ. ಅದೇ ವಾಕ್ಯದಲ್ಲಿಯೇ ಇರುವ ಏಳು ಆಕಾಶಗಳನ್ನು ಅಲ್ಲದೆ ಭೂಮಿ ಏನೆಂದು ಯೋಚಿಸಿದರೆ, ನಾಡಿಕೇಂದ್ರಗಳಿಂದ ಶಕ್ತಿ ಪ್ರವಹಿಸುವ ಶರೀರವೆಲ್ಲವೂ ಭೂಮಿಯಾಗಿಯೇ ಲೆಕ್ಕಿಸಲ್ಪಡುತ್ತಿದೆ. ಶರೀರವೆನ್ನುವ ಭೂಮಿಯನ್ನು, ನಾಡಿಕೇಂದ್ರಗಳೆನ್ನುವ ಆಕಾಶಗಳನ್ನು ದೇವರು

ಸೃಷ್ಟಿಸಿದ್ದಾನೆಂದು ನೇರವಾಗಿ ಹೇಳದೆ, ಆಕಾಶಗಳನ್ನು, ಭೂಮಿಯನ್ನು ಅಲ್ಲಾಹ್ ಸೃಷ್ಟಿಸಿದ್ದಾನೆಂದು ಅದರಲ್ಲಿ ನಿದರ್ಶನವಿದೆಯೆಂದು ಮರೆಯಲ್ಲಿ ಹೇಳಿದ್ದಾನೆ. ಭೂಮಿಯಾವುದಾಗಿರುವುದು, ಆಕಾಶಗಳು ಯಾವಾಗಿರುವವು ತಿಳಿಯುವುದೇ **ಪರಮಾರ್ಥ** ಎಂದಿದ್ದಾರೆ. ಶರೀರದಲ್ಲಿ ಎಷ್ಟೋ ದೊಡ್ಡದಾದ ಜ್ಞಾನ ಒಳಗೊಂಡಿರುವುದರಿಂದ **ಸತ್ಯಬದ್ಧವಾಗಿ** ತಯಾರು ಮಾಡಿದ್ದೇನೆಂದು ಹೇಳಿದ್ದಾನೆ. ಶರೀರದಲ್ಲಿ ಆಕಾಶಗಳು ಭೂಮಿ ಕಾಣಿಸದೆ ಇರುವುದರಿಂದ **'ನಿದರ್ಶನ'** ಎಂದು ಸಹಾ ಹೇಳಿದ್ದಾರೆ.

ಈಗ ತಿಳಿಯಲ್ಪಡುವ ವಿಷಯವನ್ನು ಗ್ರಹಿಸದೆಹೋದರೆ, ಅಂತಹವರು ಪರಮಾರ್ಥವನ್ನು ತಿಳಿಯಲಾರರು, ನಿದರ್ಶನವನ್ನು ತಿಳಿಯಲಾರರು. ದೇವರು ಈ ವಿಷಯವನ್ನು ಅಂದರೇ ತನ್ನ ಜ್ಞಾನ ವಿಷಯವನ್ನು ಮೊದಲೇ ತಿಳಿಸುತ್ತಾ, ಖುರಾನ್ ಗ್ರಂಥದಲ್ಲಿ ಸೂಕ್ಷ್ಮ ಜ್ಞಾನ ವಿಷಯಗಳು ಇವೆಯೆಂದು, ಅಂತಹ ಸೂಕ್ಷ್ಮಜ್ಞಾನ ಬುದ್ಧಿ, ಶ್ರದ್ಧೆ ಇರುವವರು ಮಾತ್ರವೇ ಗ್ರಹಿಸಬಲ್ಲರೆಂದು ತಿಳಿಸಿದ್ದಾನೆ. ಅಷ್ಟೇ ಅಲ್ಲದೆ. ಸೂಕ್ಷ್ಮ ವಿಷಯಗಳ ಜ್ಞಾನ ದೇವರಿಗೆ ಹೊರತು ಯಾವ ಮಾನವನಿಗು ತಿಳಿದಿಲ್ಲವೆಂದು ಮೊದಲೇ ಹೇಳಿದ್ದಾನೆ. ಶರೀರದಲ್ಲಿ **ಸ್ಮೃತಿ, ಜ್ಞಾನ, ಊಹೆ** ದೇವರಿಂದಲೇ ಉಂಟಾಗುತ್ತವೆಂದು ಭಗವದ್ಗೀತೆಯಲ್ಲಿ ಪುರಷೋತ್ತಮ ಪ್ರಾಪ್ತಿ ಯೋಗವೆನ್ನುವ 15ನೇ ಶ್ಲೋಕದಲ್ಲಿ ಹೇಳಿದ್ದಾನೆ ನೋಡಿರಿ.

**ಶ್ಲೋ॥ ಸರ್ವಸ್ಯ ಚಾಹಂ ಹೃದಿ ಸನ್ನಿ ವಿಷ್ಟೋ ಮತ್ತಃ, ಸ್ಮೃತಿರ್ ಜ್ಞಾನ ಮಪೋಹನಂಚ।**
**ವೇದೈಶ್ಚ ಸರ್ವೈರಹ ಮೇವ ವೇದ್ಯೋ ವೇದಾಂತ ಕೃದ್ವೇದವಿ ದೇವ ಚಾಹಮ್॥**

**ಭಾವಾರ್ಥ:– "ನಾನು ಸಖಲ ಜೀವರಾಶಿಗಳ ಹೃದಯ ಎನ್ನುವ ಬ್ರಹ್ಮನಾಡಿ ಅಥವಾ ಬೆನ್ನಾವಿನಲ್ಲಿ ಇದ್ದೇನೆ. ನನ್ನಿಂದಲೇ ಸ್ಮೃತಿ, ಜ್ಞಾನ, ಊಹೆ ಉಂಟಾಗುತ್ತವೆ. ವೇದಗಳೆಲ್ಲವು ನನ್ನನ್ನೇ ತಿಳಿಸುತ್ತಿವೆ. ವೇದ ಫಲಧಾತನು ಕೂಡಾ ನಾನೇ"** ಎಂದು ದೇವರು ತನ್ನ ಶ್ಲೋಕದಲ್ಲಿ ಹೇಳಿದ್ದಾನೆ. ಇದನ್ನನುಸರಿಸಿ ಅಗತ್ಯಬಂದಾಗ ಮನುಷ್ಯ ಶರೀರದಿಂದ ದೇವರೇ ತನ್ನ ಜ್ಞಾನವನ್ನು ಒದಗಿಸುತ್ತಾನೆಂದು

ತಿಳಿಯುತ್ತಿದೆ. ಈಗಲೂ ಸಹ ದೇವರು ನನಗೆ ನೀಡಿದ ಜ್ಞಾನವನ್ನೇ ನಿಮಗೆ ಹೇಳುತ್ತಿದ್ದೇವೆ. ದೇವರ ಜ್ಞಾನ ದೇವರಿಗೆ ಹೊರತುಪಡಿಸಿ ಇತರ ಮಾನವರಿಗೆ ಯಾರಿಗೂ ತಿಳಿಯದೆಂದು ಖುರಾನ್ ಗ್ರಂಥದಲ್ಲಿ ಸೂರಾ 3, ಆಯತ್ 7ರಲ್ಲಿ ತಿಳಿಸಿದ್ದಾನೆ. ಯಾವ ಮಾನವನ ಮೇಲೆ ನನ್ನ ಜ್ಞಾನವನ್ನು ಪ್ರಸಾರಮಾಡಲಿಲ್ಲ ವೆಂದು ಸೂರಾ 6, ಆಯತ್ 91 ರಲ್ಲಿ ಕೂಡಾ ತಿಳಿಸಿದ್ದಾನೆ. ದೇವರ ಜ್ಞಾನವನ್ನು ದೇವರು ತಿಳಿಸಿದರೇನೆ ಮನುಷ್ಯರಾದ ನಮಗೆ ತಿಳಿಯುತ್ತದೆ. ಸೂರಾ 29, ಆಯತ್ 44 ರಲ್ಲಿರುವ ಸಮಾಚಾರ ಪೂರ್ತಿ ಸೂಕ್ಷ್ಮಜ್ಞಾನದಿಂದ ಕೂಡಿ ಕೊಂಡಿರುವುದಾಗಿದೆ. ಇಲ್ಲಿರುವ ಜ್ಞಾನ ವಿಷಯ ಶರೀರ ಅಂತರ್ಭಾಗಗಳಲ್ಲಿ ಕಾಣಿಸದೆ ಇರುವುದರಿಂದ ಇದು ನಿದರ್ಶನ ಜ್ಞಾನವೆಂದು ವಾಕ್ಯದಲ್ಲಿ ಹೇಳಿದ್ದಾರೆ. ಕಾಣಿಸುವ ಭೂಮಿ, ಆಕಾಶಗಳಿಗಿಂತ ಬೇರೆಯಾದ ಅರ್ಥದಿಂದ ಕೂಡಿ ಕೊಂಡಿರುವುದರಿಂದ ಪರ+ಅರ್ಥ=ಪರಮಾರ್ಥದಿಂದ ಕೂಡಿಕೊಂಡಿದೆಯೆಂದು ಹೇಳಿದ್ದಾರೆ.

ಪರಮಾರ್ಥ ಎಂದರೇ ನೀವು ಅಂದುಕೊಂಡ ಅರ್ಥ ಅಲ್ಲವೆಂದು, ಸ್ಪಷ್ಟವಾಗಿ ತಿಳಿದುಹೋಗುತ್ತದೆ. ಅದರಪ್ರಕಾರ ನಾವು ಅಂದುಕೊಂಡ ಆಕಾಶ ಅಲ್ಲ, ಹಾಗೆಯೇ ನಾವು ಅಂದುಕೊಂಡ ಭೂಮಿ ಅಲ್ಲವೆಂದು ತಿಳಿದುಹೋಗಿದೆ. ಅದೇನೋ ನಮ್ಮ ಶರೀರದಲ್ಲಿ ಚಿದಂಬರ ರಹಸ್ಯವೆಂದು ತಿಳಿದುಹೋಗಿದೆ. ಚಿದಂಬರ ರಹಸ್ಯವೆನ್ನುವ **"ಬಟ್ಟೆ ಬಯಲ"**ನ್ನು ದೃಶ್ಯರೂಪವಾಗಿ ತೋರಿಸಿ ದಂತೆ ನಾವು ಕೂಡಾ ನಮ್ಮ ಶರೀರದಲ್ಲಿನ ದೇವರು ಹೇಳಿದ ರಹಸ್ಯವನ್ನು ಇರುವುದಿದ್ದಂತೆ ದೃಶ್ಯದಹಾಗೆ ಚಿತ್ರೀಕರಿಸಿಕೊಂಡು ನಂತರ ಪುಟದ ಚಿತ್ರದಲ್ಲಿ ನೋಡಿರಿ.

ದೇವರು ತನ್ನ ಜ್ಞಾನದಲ್ಲಿ ಮೊದಲನೆದಾಗಿ ತನ್ನ ಸೃಷ್ಟಿಯನ್ನು ಕುರಿತು ಹೇಳಿದ್ದಾನೆ. ನಂತರ ತನ್ನ ಜ್ಞಾನವನ್ನು ಹೇಳಿದ್ದಾನೆ. ಮೊದಲು ಏಳು ಆಕಾಶಗಳನ್ನು ಹೇಗೆ ಸೃಷ್ಟಿಸಿದ್ದಾನೋ ನಿದರ್ಶನ ರೂಪವಾಗಿರುವ ಜ್ಞಾನವನ್ನು ದರ್ಶನವಾಗಿ ಮಾಡಿ ನೋಡಿಕೊಂಡಿದ್ದೇವೆ. ಸೃಷ್ಟಿ ನಂತರ ಮುಖ್ಯವಾದ




ಜ್ಞಾನವಾಗಿ ಹೇಳಿರುವುದು ಮೂರು ಆತ್ಮಗಳ ವಿಷಯ. ಮೂರು ಆತ್ಮಗಳ ವಿಷಯವನ್ನು, ಮೂರು ದೈವಗ್ರಂಥಗಳಲ್ಲಿ ಹೇಳುವುದಾಗಿದೆ. ತೌರಾತ್ (ಭಗವದ್ಗೀತೆ) ಗ್ರಂಥದಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಹೇಳಿದ ಮೂರು ಆತ್ಮಗಳ ವಿಷಯವನ್ನು ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ಹೇಳುವುದು ನಡೆದಿದೆ.

**1)** **ಕ್ಷರನು** (ಜೀವಾತ್ಮ) **ಅಕ್ಷರನು** (ಆತ್ಮ) **ಪುರುಷೋತ್ತಮನು** (ಪರಮಾತ್ಮ)

**ಎನ್ನುವ ಮೂವರು ಪುರುಷರಾದವರು ಪ್ರತಿ ಮನುಷ್ಯನ ಶರೀರದಲ್ಲಿ ಇದ್ದಾರೆ.**

**(ಭಗವದ್ಗೀತೆಯಲ್ಲಿ, ಪುರುಷೋತ್ತಮ ಪ್ರಾಪ್ತಿ ಯೋಗ 16,17 ಶ್ಲೋಕಗಳನ್ನು ನೋಡಿರಿ.)**

| | | | |
|---|---|---|---|
| **2)** | **ಕುಮಾರನು** | **ತಂದೆ** | **ಪರಿಶುದ್ಧಾತ್ಮ** |
| | **(ಜೀವಾತ್ಮ)** | **(ಆತ್ಮ)** | **(ಪರಮಾತ್ಮ)** |

**ಎನ್ನುವ ಮೂವರು ತಿಳಿಯದವರು ಪ್ರತಿ ಮನುಷ್ಯನ ಶರೀರದಲ್ಲಿ ಇದ್ದಾರೆ.**

**(ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 28ನೇ ಅಧ್ಯಾಯ 19, 20 ವಾಕ್ಯಗಳನ್ನು ನೋಡಿರಿ.)**

| | | | |
|---|---|---|---|
| **3)** | **ನಡೆಸಲ್ಪಡುವವನು** | **ನಡೆಸುವವನು** | **ಸಾಕ್ಷಿಯಾಗಿ ನೋಡುವವನು** |
| | **(ಜೀವಾತ್ಮ)** | **(ಆತ್ಮ)** | **(ಪರಮಾತ್ಮ)** |

**ಎನ್ನುವ ಮೂವರು ಕಾಣಿಸದವರು ಪ್ರತಿ ಮನುಷ್ಯನ ಶರೀರದಲ್ಲಿ ಇದ್ದಾರೆ.**

**(ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಸೂರಾ 50, ಆಯತ್ 21ನ್ನು ನೋಡಿರಿ.)**

ದೇವರು ಹೇಳಿದ ಜ್ಞಾನದಲ್ಲಿ ಮೊದಲನೆಯದು ಸೃಷ್ಠಿಯಾಗಿದ್ದು, ಎರಡನೆಯದು ಸೃಷ್ಠಿಯಲ್ಲಿರುವ ಮೂರು ಆತ್ಮಗಳ ಜ್ಞಾನ. ಮೂರು ಆತ್ಮಗಳ ಜ್ಞಾನ. ಮೂರು ಆತ್ಮಗಳ ಕುರಿತು ಮೂಡು ದೈವ ಗ್ರಂಥಗಳಲ್ಲಿ ಹೇಳಿದ್ದಾರೆ. ನಂತರ ಮುಖ್ಯವಾದ ಜ್ಞಾನ ಮನುಷ್ಯರು ಮಾಡಿಕೊಂಡು ಪಾಪಪುಣ್ಯಗಳೆನ್ನು ಕರ್ಮವನ್ನು ಕುರಿತು ತಿಳಿದುಕೊಳ್ಳುವ ಜ್ಞಾನ. ಕರ್ಮವನ್ನು ಕುರಿತು ಮೂರು ದೈವಗ್ರಂಥಗಳಲ್ಲಿ ಎಷ್ಟೋ ವಿವರಣೆ ಕೊಟ್ಟಿದ್ದಾರೆ. ಕರ್ಮ ಮನುಷ್ಯನ ಶರೀರದಲ್ಲಿಯೇ ಪರ್ಯವೇಕ್ಷನಿಂದ ಬರೆಯಲ್ಪಡುತ್ತಿದೆಯೆಂದು ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಹೇಳಿದ್ದಾರೆ. ಕರ್ಮಲಿಖಿತವನ್ನು **'ಕರ್ಮಪತ್ರವೆಂದು'** ಹೇಳುವುದಲ್ಲದೆ ಕರ್ಮ ಒಂದು ದಿವ್ಯಗ್ರಂಥದಲ್ಲಿ ನಮೋದು ಮಾಡಲ್ಪಡುತ್ತಿದೆಯೆಂದು ಕೂಡಾ ಹೇಳಿದ್ದಾರೆ. ಕರ್ಮವನ್ನು ಅನುಭವಿಸದೆ ಯಾರೂ ತಪ್ಪಿಸಿಕೊಳ್ಳಲಾರರೆಂದು ಹೇಳುವುದಲ್ಲದೆ, ದೇವರು ಒಬ್ಬನೇ ಅದನ್ನು

ಕ್ಷಮಿಸುವ ಕ್ಷಮಾಶೀಲನೆಂದು ಕೂಡಾ ಹೇಳಿದ್ದಾರೆ. ಕರ್ಮ ನಮ್ಮ ಶರೀರದಲ್ಲಿ ಹೇಗಿರುವುದು, ಎಲ್ಲಿರುವುದು ರಹಸ್ಯ ಜ್ಞಾನವಾಗಿ ಖುರಾನ್‌ನಲ್ಲಿಯೂ, ಭಗವದ್ಗೀತೆಯಲ್ಲಿಯೂ ಹೇಳಿದ್ದಾರೆ.

ದೇವರು ಮೊದಲು ಸೃಷ್ಟಿಯನ್ನು ಕುರಿತಾದ ಜ್ಞಾನ ಹೇಳಿದ್ದಾನೆ. ನಂತರ ಮೂರು ಆತ್ಮಗಳನ್ನು ಕುರಿತಾದ ಜ್ಞಾನ ಹೇಳಿದ್ದಾನೆ. ಆ ನಂತರ ಜೀವಿಯು ಕರ್ಮದಿಂದ ನಡೆಸಲ್ಪಡುತ್ತಿದ್ದಾನೆಂದು, ಕರ್ಮಗಳನ್ನು ಕುರಿತು ಜ್ಞಾನವನ್ನು ಹೇಳಿದ್ದಾನೆ. ಕೊನೆಯದಾಗಿ ಪ್ರತಿ ಕರ್ಮಕ್ಕೆ, ಪ್ರತಿ ಕೆಲಸಕ್ಕೆ ಒಂದು ಗಡುವು ಇದೆಯೆಂದು, ಪ್ರತಿ ಗಡುವು ಕಾಲದಲ್ಲಿ ನಿರ್ಣಯಿಸಲ್ಪಟ್ಟಿದೆಯೆಂದು ದೇವರು ತನ್ನ ಜ್ಞಾನದಲ್ಲಿ ಹೇಳಿದ್ದಾನೆ. ಈ ವಿಧವಾಗಿ ದೇವರ ಜ್ಞಾನವನ್ನು ನಾಲ್ಕು ಮುಖ್ಯವಾದ ಭಾಗಗಳಾಗಿ ಹೇಳಿದ್ದಾನೆ. ಮೂರು ದೈವ ಗ್ರಂಥಗಳಲ್ಲಿ ಈ ನಾಲ್ಕು ಜ್ಞಾನಗಳೇ ಮುಖ್ಯವಾಗಿ ಹೇಳಲ್ಪಟ್ಟಿವೆ. ಈ ನಾಲ್ಕು ಭಾಗಗಳ ಜ್ಞಾನವನ್ನು ದರ್ಶನವಾಗಿ ಮಾಡಿಕೊಂಡರೆ ಅದೇ ದೇವರ ಚಿಹ್ನೆಯಾಗುತ್ತದೆ. ದೇವರ ಜ್ಞಾನ ಅದೃಶ್ಯರೂಪದಲ್ಲಿ ಪರಮಾರ್ಥವಾಗಿದೆ. ಅಂತಹ ಪರಮಾರ್ಥ ವನ್ನು ಅರ್ಥಮಾಡಿಕೊಂಡರೆ, ನಿದರ್ಶನ ಜ್ಞಾನವನ್ನು ದರ್ಶನ ರೂಪವಾಗಿ ಮಾಡಿಕೊಂಡರೆ, ದರ್ಶನ ಕೊಡುವುದೇ ದೇವರ ಚಿಹ್ನೆಯಾಗುತ್ತದೆ. ದೇವರ ಚಿಹ್ನೆ ಅತ್ಯಂತ ಶಕ್ತಿವಂತವಾದುದು, ಅಂತಹ ದೈವಜ್ಞಾನವನ್ನು ಹೇಗೆ ದೃಶ್ಯರೂಪವಾದ ಚಿಹ್ನೆಯಾಗಿ (ಗುರುತಾಗಿ) ಮಾಡಿಕೊಳ್ಳಬೇಕೊ ಈಗ ವಿವರಿಸಿಕೊಳ್ಳೋಣ. ದೇವರು ಮೊದಲು ಭೂಮಿಯನ್ನು, ಏಳು ಆಕಾಶಗಳನ್ನು ಸೃಷ್ಠಿಸಿದ್ದಾನೆ ಅದನ್ನು ದೃಶ್ಯರೂಪವಾಗಿ ಮಾಡಿಕೊಂಡಾಗ ಶರೀರ ಭೂಮಿಯಾಗಿ, ಏಳು ಆಕಾಶಗಳು ಶರೀರದಲ್ಲಿರುವ ಶರೀರವನ್ನು ನಡೆಸುವ ಏಳು ನಾಡಿಕೇಂದ್ರಗಳಾಗಿ ಹೇಳಿಕೊಂಡಿದ್ದೇವೆ. ಏಳನೆ ನಾಡಿಕೇಂದ್ರದ ಮೇಲೆ ದೇವರ ಸಿಂಹಾಸನ ಇರುವಂತೆ, ದೇವರು ಅಲ್ಲಿರುವಂತೆ ಖುರಾನ್ ಗ್ರಂಥದಲ್ಲಿ ಹೇಳಿದ್ದಾರೆ. ಅದನ್ನು ದೃಶ್ಯರೂಪವಾಗಿ ನೋಡಿಕೊಳ್ಳಿರೆಂದು ಹೇಳಿದ್ದಾರೆ. ಹಾಗೆ ಜ್ಞಾನದೃಷ್ಠಿ ಯಿಂದ ನೋಡಿದರೆ ದೇವರ ಸೃಷ್ಠಿಯಲ್ಲಿ ಏನಾದರೂ ಲೋಪವಿದೆಯೋ

ಇಲ್ಲವೋ ನಿನಗೆ ತಿಳಿಯುತ್ತದೆ ಅಲ್ಲವೆ! ಎಂದಿದ್ದಾನೆ. ಆ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 67, ಆಯತ್ 3ರಲ್ಲಿ **(67–3) "ಆತನು ಏಳು ಆಕಾಶಗಳನ್ನು ಒಂದರಮೇಲೊಂದು ನಿರ್ಮಿಸಿದ್ದಾನೆ. ನೀನು ಯಾವಕಡೆ ನೋಡಿದರೂ ಕರುಣಾಮಯನ ಸೃಷ್ಠಿ ಪಕ್ರಿಯೆಯಲ್ಲಿ ಎಂತಹ ಲೋಪವು ತಿಳಿಯಲಾರೆ. ಬೇಕೆಂದರೆ ಮತ್ತೊಂದುಸಲ ದೃಷ್ಠಿಯನ್ನು ಹರಿಸಿ ನೋಡು, ನಿನಗೇನಾದರೂ ಲೋಪ ಕಾಣಿಸುತ್ತದೇನೋ!"**.

ಈ ಆಯತ್‌ಗಳಲ್ಲಿ ನೀನು ಯಾವಕಡೆ ನೋಡಿದರೂ ಒಂದು ದೃಶ್ಯವನ್ನು ನೋಡಿದಂತೆ ಹೇಳಿದ್ದೀರಲ್ಲವೆ! ದೇವರ ಸೃಷ್ಠಿಯನ್ನು "ಬೇಕೆಂದರೆ ಮತ್ತೊಂದುಸಲ ದೃಷ್ಠಿಯನ್ನು ಹರಿಸಿ ನೋಡು ನಿನಗೇನಾದರೂ ಲೋಪ ಕಾಣಿಸುತ್ತದೇನೋ". ಎಂದು ಹೇಳುವುದು ಕೂಡೂ ನಡೆದಿದೆ. ಇದನ್ನನುಸರಿಸಿ ದೇವರ ಸೃಷ್ಟಿಯನ್ನು ದೃಶ್ಯರೂಪದಲ್ಲಿ ನೋಡಿರೆಂದು, ಏನಾದರೂ ಲೋಪ ಕಾಣಿಸುತ್ತದೇನೋಯೆಂದು ಹೇಳಿದ್ದಾರೆ ಅಲ್ಲವೆ! ಇಲ್ಲಿ ಸೃಷ್ಟಿಯನ್ನು ದೃಶ್ಯರೂಪವಾಗಿ ನೋಡಿರೆಂದಲ್ಲವೆ ಹೇಳಿರುವುದು. ಇಲ್ಲಿ ದೇವರು ಹೇಳಿದಂತೆ ಸೃಷ್ಟಿಯನ್ನು ದೃಷ್ಠಿರೂಪದೊಳಗೆ ಬದಲಿಸಿಕೊಂಡು ದೃಶ್ಯವಾಗಿ ನೋಡಲ್ಪಟ್ಟರೆ ಏಳು ಆಕಾಶಗಳು ಹೀಗೆ ಇವೆಯೆಂದು ಮೊದಲೇ ಒಂದು ವಿಧವಾಗಿ ಚಿತ್ರಿಸಿ ನೋಡಿಕೊಂಡಿದ್ದೇವೆ. ಈಗ ಏಳು ಆಕಾಶಗಳ ಮೇಲೆ ದೇವರ ಇರುವಿಕೆ ಹೇಗಿದೆಯೋ ಚಿತ್ರಿಸಿಕೊಂಡು ಕೆಳಗಿನ ಚಿತ್ರದಲ್ಲಿ ನೋಡೋಣ.

ಏಳು ಆಕಾಶಗಳ ಮೇಲೆ ದೇವರ ನಿಲಯವನ್ನು ದೃಶ್ಯರೂಪವಾಗಿ ಮಾಡಿಕೊಂಡಿದ್ದೇವೆ. ದೇವರು ನಿವಾಸಿಸುವ ನಿವಾಸವನ್ನು ಬ್ರಹ್ಮಚಕ್ರ ಎಂದು ಕರೆಯುತ್ತೇವೆ. ಬ್ರಹ್ಮಚಕ್ರ ಎಂದರೇ ದೇವರ ಚಕ್ರವೆಂದು ಅರ್ಥ. ದೇವರ ಚಕ್ರ ಎರಡು ಭಾಗಗಳಾಗಿ ಇದೆ. ಒಂದು ಭಾಗ ದೇವರ ಹಗಲು, ಮತ್ತೊಂದು ಭಾಗ ದೇವರ ರಾತ್ರಿ. ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 17ನೇ ಶ್ಲೋಕದಲ್ಲಿ ಸಾವಿರಯುಗಗಳು ದೇವರಿಗೆ ಒಂದು ಹಗಲು, ಹಾಗೇ ಸಾವಿರಯುಗಗಳು ದೇವರಿಗೆ ಒಂದು ರಾತ್ರಿ ಎಂದು ಹೇಳಿದ್ದಾರೆ. ದೇವರ




ಚಕ್ರ ಒಂದು ಸುತ್ತು ತಿರುಗುವುದಕ್ಕೆ ಎರಡುಸಾವಿರ ಯುಗಗಳ ಕಾಲ ಹಿಡಿಯುತ್ತದೆಂದು ತಿಳಿಯುತ್ತದೆ. ಅಂದರೇ ದೇವರಿಗೆ ಒಂದು ದಿನ ಎಂದರೇ ಎರಡುಸಾವಿರ ಯುಗಗಳ ಕಾಲವೆಂದು ಅರ್ಥ. ದೇವರೊಂದರ ಹಗಲು ರಾತ್ರಿಯನ್ನು ಗ್ರಹಿಸಲ್ಪಟ್ಟರೆ ಎಷ್ಟೋ ಉನ್ನತವಾದ ಜ್ಞಾನವನ್ನು ಮನುಷ್ಯ ತಿಳಿಯುತ್ತಾನೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 24, ಆಯತ್ 44ರಲ್ಲಿ ಈ ವಿಧವಾಗಿದೆ ನೋಡಿರಿ. **(24–44) "ಅಲ್ಲಾಹ್ ರಾತ್ರಿಹಗಲುಗಳನ್ನು ಬದಲಾಯಿಸುತ್ತಾ ಇರುತ್ತಾನೆ. ಕಣ್ಣಿರುವವನಿಗೆ ಇದರಲ್ಲಿ ಉತ್ತಮ ಗುಣಪಾಠವಿದೆ."**

ಇಲ್ಲಿ ಚೆನ್ನಾಗಿ ಜಾಗ್ರತೆಯಾಗಿ ವಿವರಿಸಿಕೊಂಡು ನೋಡಿದರೆ **ಕಣ್ಣಿರುವವನಿಗೆ** ಇದರಲ್ಲಿ ಗುಣಪಾಠ ಇದೆಯೆಂದು ಹೇಳಿದ್ದಾರೆ ಅಲ್ಲವೆ! ಇದನ್ನನುಸರಿಸಿ ದೇವರ ಹಗಲು ರಾತ್ರಿಯನ್ನು ಚಿತ್ರಪಟವಾಗಿ ನೋಡುವವನಿಗೆ ಅದರಲ್ಲಿನ ರಹಸ್ಯ ಜ್ಞಾನ ತಿಳಿಯಬಲ್ಲದೆಂದು ಅರ್ಥವಾಗುತ್ತಿದೆ. ಆದ್ದರಿಂದ

ನಾವು ದೇವರ ನಿವಾಸವನ್ನು ರಾತ್ರಿ ಹಗಲಾಗಿ ವಿಭಜಿಸಿ ಏಳು ಆಕಾಶಗಳ ಮೇಲಿರುವ ಬ್ರಹ್ಮಚಕ್ರವನ್ನು ತೋರಿಸಿದ್ದೇವೆ. ಕೆಲವರಿಗೆ ನಾವು ಹೇಳುವುದು ಸ್ವಲ್ಪವೂ ಅರ್ಥ ಆಗದಿರುವುದರಿಂದ ನಮ್ಮನ್ನು ಅಜ್ಞಾನಿಗಳಿಗೆ ಹೋಲಿಸಿ ದೂಷಿಸುತ್ತಾ, ಅಜ್ಞಾನವನ್ನು ಬೋಧಿಸುತ್ತಿದ್ದಾನೆಂದು ಹೇಳಬಹುದು. ಅವರಿಗೆ ನಾವು ಹೇಳುವುದೇನೆಂದರೇ! ನಾವು ಎಲ್ಲಿಯೂ ಸ್ವತಃವಾಗಿ ಬೋಧಿಸದೆ ದೈವಗ್ರಂಥವನ್ನು ಆಧಾರ ಮಾಡಿಕೊಂಡೇ ಹೇಳುತ್ತಿದ್ದೇವೆ. ಕೆಲವರು ತಾವು ಅಜ್ಞಾನದಲ್ಲಿದ್ದು ಅಲ್ಲಾಹ್ ನಿದರ್ಶನಗಳು ದರ್ಶನ ರೂಪವಾದಾಗ, ನಿದರ್ಶನಗಳ ವಿಷಯದಲ್ಲಿ ಮೊಂಡಾಗಿ ಮಾತನಾಡುತ್ತಿದ್ದಾರೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 40, ಆಯತ್ 35ರಲ್ಲಿ ಮೊಂಡುವಾದಿಗಳನ್ನು ಕುರಿತು ಹೀಗೆ ಹೇಳಿದ್ದಾನೆ ನೋಡಿರಿ. **(40-35) "ಅವರು ತಮ್ಮ ಬಳಿಗೆ ಬಂದ ಯಾವ ಪ್ರಮಾಣವೂ ಇಲ್ಲದೆಯೇ ಅಲ್ಲಾಹ್ ನಿದರ್ಶನಗಳ ವಿಷಯದಲ್ಲಿ ಮೊಂಡಾಗಿ ವಾದಿಸುತ್ತಿದ್ದಾರೆ. ಈ ವದಂತಿ ಅಲ್ಲಾಹ್‌ಹತ್ತಿರ ಮತ್ತು ವಿಶ್ವಾಸಿಗಳ ಹತ್ತಿರ ಕೂಡಾ ಎಷ್ಟೋ ಅಯಿಷ್ಟಕರವಾದುದು. ಈ ವಿಧವಾಗಿ ಗರ್ವಿಷ್ಟಿ, ಕ್ರೂರನಾದ ಪ್ರತಿವ್ಯಕ್ತಿ ಹೃದಯಗಳ ಮೇಲೆ ಅಲ್ಲಾ ಮುದ್ರೆ ಹಾಕುತ್ತಾನೆ."**

ನಾವು ಜ್ಞಾನದೃಷ್ಠಿ ಇಲ್ಲದವರಿಗು ಕೂಡಾ ಅರ್ಥವಾಗುವಂತೆ, ಸೂಕ್ಷ್ಮವಾದ ದೇವರ ಜ್ಞಾನವನ್ನು ಸ್ಥೂಲವಾದ ಗುರುತಾಗಿ, ಎಲ್ಲರಿಗೂ ತಿಳಿಯುವಂತೆ ದೃಶ್ಯ ರೂಪವಾಗಿ ತೋರಿಸುತ್ತಿದ್ದೇವೆ. ನಾವು ಪ್ರತಿಯೊಂದನ್ನು ದೈವಗ್ರಂಥಗಳ ಆಧಾರದಿಂದಲೇ ತೋರಿಸುತ್ತಿದ್ದೇವೆ. ಇಲ್ಲಿ ಕೆಲವರಿಗೆ ಒಂದು ಅನುಮಾನ ಬಂದು ಹೀಗೆ ಪ್ರಶ್ನಿಸಬಹುದು. ಸೂಕ್ಷ್ಮವಾದ ದೇವರ ಜ್ಞಾನ ಬೋಧನೆಗಳ ರೂಪದಲ್ಲಿ ಇರುವಾಗ, ದೃಶ್ಯ ರೂಪದಲ್ಲಿ ನೋಡುವುದಕ್ಕೆ ಸಾಧ್ಯವಾಗುತ್ತದಾ? ಎಂದು ಕೇಳಬಹುದು. ಅದಕ್ಕೆ ಉತ್ತರವಾಗಿ ನಾವು ಹೀಗೆ ಹೇಳುತ್ತಿದ್ದೇವೆ. ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗ ಎನ್ನುವ ಅಧ್ಯಾಯದಲ್ಲಿ 10, 11 ಶ್ಲೋಕಗಳಲ್ಲಿ ಈ ವಿಧವಾಗಿ ಇದೆ ನೋಡಿರಿ.

**10ನೇ. ಶ್ಲೋ॥ ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥**

**11ನೇ. ಶ್ಲೋ॥ ಯತನ್ತೋ ಯೋಗಿನ ಶ್ಚೈನಂ ಪಶ್ಯನ್ತ್ಯಾತ್ಮ ನ್ಯವಸ್ಥಿತಮ್।**
**ಯತನ್ತೋ ಪ್ರಕೃತಾತ್ಮಾನೋ ನೈನಂ ಪಶ್ಯನ್ತ್ಯ ಚೇತಸಃ॥**

**ಭಾವಾರ್ಥ :–** "ಜೀವಾತ್ಮ ಗುಣಗಳಿರುವವನಾಗಿ ಶರೀರದಲ್ಲಿ ನಿವಾಸವಿರುತ್ತಾನೆ. ಗುಣಗಳ ಮಧ್ಯದಲ್ಲಿರುತ್ತಾ ವಿಷಯ ಸುಖಗಳನ್ನು ಅನುಭವಿಸುತ್ತಿರುತ್ತಾನೆ. ಈ ವಿಧಾನವನ್ನು ಮೂಢರು ತಿಳಿಯಲಾರರು. ಜ್ಞಾನನೇತ್ರರು ಮಾತ್ರ ನೋಡುತ್ತಾರೆ."

"ಶರೀರದಲ್ಲಿರುವ ಆತ್ಮವನ್ನು, ಜೀವಾತ್ಮವನ್ನು ಪ್ರಯತ್ನ ಮಾಡುವ ಯೋಗಿಗಳು ತಿಳಿಯಬಲ್ಲರು (ನೋಡಬಲ್ಲರು). ಮೂಢರಾದವರು ಎಷ್ಟು ಪ್ರಯತ್ನಿಸಿದರೂ ಶರೀರದಲ್ಲಿನ ತತಂಗವನ್ನು ದೈವಯಂತ್ರಾಂಗವನ್ನು ನೋಡಲಾರರು".

ಖುರಾನ್ ಗ್ರಂಥದಲ್ಲಿ ನಿದರ್ಶನವಾಗಿರುವುದನ್ನು ನೋಡುತ್ತಾರೆನ್ನುವಂತೆ ಭಗವದ್ಗೀತೆ ಗ್ರಂಥದಲ್ಲಿ 5000 ವರ್ಷಗಳ ಪೂರ್ವದಲ್ಲಿಯೇ, ಶರೀರದಲ್ಲಿನ ಜೀವಿಯು ಗುಣಗಳ ಮಧ್ಯದಲ್ಲಿ ಹೇಗಿರುವುದು ಯೋಗಿಗಳು ತಿಳಿಯಬಲ್ಲರೆಂದು, ಅಜ್ಞಾನಿಗಳು ತಿಳಿಯಲಾರರೆಂದು ಹೇಳಿದ್ದಾರೆ.

ದೈವಗ್ರಂಥಗಳಲ್ಲಿ ಪ್ರಮಾಣಗಳಾಗಿ ಹೇಳಿದಂತೆ ನಿದರ್ಶನವನ್ನು ದರ್ಶನವಾಗಿ ಮಾಡಿಕೊಂಡರೂ, ಏಳು ಆಕಾಶಗಳು ನಮ್ಮ ಶರೀರದಲ್ಲಿ ಹೇಗಿರುವುದು ತಿಳಿದುಹೋಗಿದೆ. ನಂತರ ಏಳು ಆಕಾಶಗಳ ಮೇಲೆ ದೇವರ ಸ್ಥಾನ ಹೇಗಿರುವುದು ಗುರುತಿಸಿದ್ದೇವೆ. ಅದೇ ವಿಧಾನದಿಂದ ದೇವರು ಹೇಳಿದ ಜ್ಞಾನದ ಪ್ರಕಾರ ಮೂರು ಆತ್ಮಗಳ ವಿಧಾನ, ಕರ್ಮವಿಧಾನ, ಕರ್ಮವೊಂದರ ಗಡುವು ವಿಧಾನವನ್ನು ದೃಶ್ಯರೂಪದಲ್ಲಿ ನೋಡುವುದಕ್ಕೆ ಪ್ರಯತ್ನಿಸೋಣ. ಮೊದಲು ಜೀವಾತ್ಮ ನಿವಾಸವನ್ನು ಕುರಿತು ಭಗವದ್ಗೀತೆ ಶ್ಲೋಕದ ಪ್ರಕಾರ

ಮತ್ತು ಖುರಾನ್ ವಾಕ್ಯದ ಪ್ರಕಾರ ನೋಡುವುದಕ್ಕೆ ಪ್ರಯತ್ನಿಸೋಣ. ಏಳು ಆಕಾಶಗಳ ಮೇಲೆ ಪರಮಾತ್ಮ ಇರುವಂತೆ ಅಲ್ಲಿಯೇ ಏಳು ಆಕಾಶಗಳ ಮೇಲೆಯೇ ಜೀವಾತ್ಮ ಕೂಡಾ ಇದೆ. ಜೀವಾತ್ಮ ಪರಮಾತ್ಮರ ಸ್ಥಾನಕ್ಕಿಂತ ಸ್ವಲ್ಪ ಕೆಳಗೆ ನಿವಾಸವಿರುತ್ತಾನೆ. ಅದನ್ನೇ ದೃಶ್ಯವಾಗಿ ಚಿತ್ರಿಸಿಕೊಂಡು ಕೆಳಗಿನ ಚಿತ್ರದಲ್ಲಿ ನೋಡೋಣ.

ಈ ಚಿತ್ರದಲ್ಲಿ ಏಳನೇ ಆಕಾಶದ ಮೇಲಿರುವ ಬ್ರಹ್ಮಚಕ್ರದಲ್ಲಿ ಎರಡು ಭಾಗಗಳಲ್ಲಿ ದೇವರು ಇದ್ದಾನೆ. ಏಳು ಆಕಾಶಗಳ ಉದ್ದಕ್ಕೂ ಆಕಾಶದ ಮಧ್ಯದಲ್ಲಿ ಅಂದರೇ ಬ್ರಹ್ಮನಾಡಿ ಮಧ್ಯದಲ್ಲಿ ಏಳನೆ ಆಕಾಶದಿಂದ ಒಂದನೇ ಆಕಾಶದವರೆಗು



ಆತ್ಮ ಇದೆ. ಏಳನೆ ಸ್ಥಾನದಲ್ಲಿಯೇ ಅಂದರೆ!. ಏಳನೆ ಆಕಾಶದಲ್ಲಿಯೇ ಬ್ರಹ್ಮಚಕ್ರದ ಕೆಳಗೆ ಮೂರನೆ ಚಕ್ರವಾಗಿರುವ ಗುಣಚಕ್ರದಲ್ಲಿ ಜೀವಿಯು ನಿವಾಸವಿದ್ದಾನೆ. ಏಳನೇ ಸ್ಥಾನದಲ್ಲಿರುವ ನಾಲ್ಕು ಚಕ್ರಗಳಲ್ಲಿ ಜೀವಿಯು ನಿವಾಸವಿದ್ದಾನೆ. ಏಳನೆ ಸ್ಥಾನದಲ್ಲಿರುವ ನಾಲ್ಕು ಚಕ್ರಗಳಲ್ಲಿ ಮೇಲಿನದ್ದು ಬ್ರಹ್ಮಚಕ್ರವಾಗಿದ್ದು ಕೆಳಗಿನದು ಗುಣಚಕ್ರವಾಗಿದೆ. ಗುಣಚಕ್ರ ಮೂರು ಭಾಗಗಳಾಗಿ ಇದೆ. ಮೂರು ಭಾಗಗಳಲ್ಲಿ ಯಾವುದೊ ಒಂದುಕಡೆ ಜೀವಾತ್ಮ ಇರುವುದು ನಡೆಯುತ್ತಿದೆ. ಈ ವಿಧವಾಗಿ ಏಳನೆ ಆಕಾಶದಲ್ಲಿಯೇ ಅಲ್ಲಾಹ್ (ದೇವರಿ)ಗಿಂತ ಕೆಳಗಿನ ಗುಣಚಕ್ರದಲ್ಲಿ ಜೀವಾತ್ಮ ಇರುವಾಗ, ಏಳು ಆಕಾಶಗಳ ಉದ್ದಕ್ಕೂ ಬ್ರಹ್ಮನಾಡಿಯಲ್ಲಿ ಆತ್ಮಯಿದೆ. ಈ ವಿಧವಾಗಿ ಮೂರು ಆತ್ಮಗಳ ನಿವಾಸ ತೇಲಿಹೋಗಿ ದರ್ಶನರೂಪದೊಳಗೆ ಬಂದಿದೆ.

ಇಲ್ಲಿಗೆ ಏಳು ಆಕಾಶಗಳು, ಮೂರು ಆತ್ಮಗಳ ಜ್ಞಾನವೊಂದರ ನಿದರ್ಶನ, ಪರಮಾರ್ಥ ತಿಳಿದುಹೋಗಿದೆ. ಇನ್ನು ತಿಳಿಯಬೇಕಾಗಿರುವುದು ಕರ್ಮ, ಗಡುವುಗಳಿಂದ ಕೂಡಿಕೊಂಡ ಕಾಲ. ಈಗ ಕರ್ಮವನ್ನು ಕುರಿತು ನೋಡಿದರೆ ಹೀಗೆ ತಿಳಿಯಬಲ್ಲದು.

ಕರ್ಮಚಕ್ರ 12 ಭಾಗಗಳಾಗಿ ಇದೆ. ಅದರಲ್ಲಿ 1,5,9 ಸ್ಥಾನಗಳಲ್ಲಿ ಪುಣ್ಯ ನೆಲೆ ಇರುತ್ತದೆ. ಹಾಗೆಯೇ 3,7,11 ಸ್ಥಾನಗಳಲ್ಲಿ ಪಾಪ ನೆಲೆ ಇರುತ್ತದೆ. ಉಳಿದ 2,4,6,8,10,12 ಸ್ಥಾನಗಳಲ್ಲಿ ಪಾಪಪುಣ್ಯಗಳು ಎರಡು ಇವೆ. ಮನುಷ್ಯ ಮಾಡಿಕೊಂಡ ಪಾಪಗಳು ಪುಣ್ಯಗಳು ಕರ್ಮಚಕ್ರದಲ್ಲಿ ಆಯಾ ಸ್ಥಾನದಲ್ಲಿ ಆತ್ಮದಿಂದ ನಮೊದಾಗುತ್ತಿರುತ್ತವೆ. ಹಾಗೆಯೇ ಆತ್ಮದಿಂದಲೇ ಅನುಭವಿಸುವಂತೆ ಮಾಡಲ್ಪಡುತ್ತಿರುತ್ತದೆ. ಆದರೇ ಕರ್ಮಚಕ್ರಕ್ಕಿಂತ ಕೆಳಗಿರುವ ಗುಣಚಕ್ರದೊಂದಿಗೆ ಕರ್ಮಚಕ್ರಕ್ಕೆ ಸಂಬಂಧವಿರುತ್ತದೆ. ಕರ್ಮಚಕ್ರದಲ್ಲಿನ ಕರ್ಮ (ಪಾಪಪುಣ್ಯಗಳು) ಕೆಳಗಿನ ಚಕ್ರವಾದ ಗುಣಚಕ್ರದ ಮೇಲೆ ಪ್ರಸಾರವಾಗುವುದರಿಂದ ಅಲ್ಲಿರುವ ಜೀವಿಯು ಅದನ್ನು ಅನುಭವಿಸುತ್ತಾನೆ. ಇದೇ ವಿಷಯವನ್ನು ಖುರಾನ್ ಗ್ರಂಥದಲ್ಲಿ ಯಾರ ಕರ್ಮ ಅವರೇ ಅನುಭವಿಸಬೇಕೆಂದು ಸುರಾ 2, ಆಯತ್




## ಕರ್ಮಚಕ್ರ

134 ರಲ್ಲಿ ಹೇಳಿದ್ದಾರೆ. **(2–134) "ಅದು ಗತಿಸಿದ ಒಂದು ಸಮೂಹ. ಅವರು ಮಾಡಿಕೊಂಡಿರುವುದು ಅವರಿಗೇ ಸೇರುತ್ತದೆ. ನೀವು ಮಾಡಿರುವುದು ನಿಮಗೆ ಸೇರುತ್ತದೆ. ಇತರರ ಕರ್ಮವನ್ನು ಕುರಿತು ನೀವು ಪ್ರಶ್ನಿಸಲ್ಪಡುವುದಿಲ್ಲ."** ಎಂದು ಇದೆ. ಇದನ್ನನುಸರಿಸಿ ಮೇಲೆ ಕರ್ಮಚಕ್ರದಲ್ಲಿ ಏನು ನಮೋದಾಗಿದ್ದರೆ ಕೆಳಗಿನ ಚಕ್ರದಲ್ಲಿರುವ ಜೀವಿಗೆ ಅದೇ ಅನುಭವಕ್ಕೆ ಬರುತ್ತದೆ. ಇತರರ ಕರ್ಮದಿಂದ ಜೀವಿಗೆ ಸಂಬಂಧವೇ ಇಲ್ಲ. ಅದರ ಪ್ರಕ್ರಿಯೆಯಲ್ಲಿ ಗುಣಚಕ್ರದಲ್ಲಿನ ಗುಣಗಳು ಜೀವಿಯ ಮೇಲೆ ಪ್ರಯೋಗಿಸಲ್ಪಡುತ್ತವೆ. ಗುಣಚಕ್ರವನ್ನು ಚೆನ್ನಾಗಿ ಪರಿಶೀಲಿಸಿದರೆ ಈ ರೀತಿಯಾಗಿದೆ. ನಂತರ ಪುಟದ ಚಿತ್ರದಲ್ಲಿ ನೋಡಿರಿ.




**ಗುಣಚಕ್ರ**

ಗುಣಚಕ್ರ ಮೂರು ಭಾಗಗಳಾಗಿ ಇದೆ. ಒಂದೊಂದು ಭಾಗದಲ್ಲಿ ಬೇರೆಬೇರೆ ಹೆಸರುಗಳಿರುವ ಹನ್ನೆರಡು ಗುಣಗಳಿವೆ. ಒಂದೊಂದು ಭಾಗದಲ್ಲಿರುವ ಗುಣಗಳಿಗೆ ಒಂದೊಂದು ಹೆಸರಿದೆ. ಮೇಲಿನ ಭಾಗದಲ್ಲಿರುವ ಗುಣಗಳನ್ನು ತಾಮಸ ಭಾಗ ಗುಣಗಳೆಂದು ಹೇಳುತ್ತಿರುತ್ತಾರೆ. ಹಾಗೇ ಮಧ್ಯದಲ್ಲಿರುವುದನ್ನು ರಾಜಸ ಗುಣಭಾಗ ಎಂದು ಕರೆಯುತ್ತೇವೆ. ಹಾಗೆ ಮೂರನೆಯದನ್ನು ಸಾತ್ತ್ವಿಕ ಗುಣಭಾಗ ಎಂದು ಕರೆಯುತ್ತೇವೆ. ಮಧ್ಯದಲ್ಲಿ ದುಂಡಾಗಿರುವ ಭಾಗ ಬ್ರಹ್ಮನಾಡಿಯಾಗಿದೆ. ಅದನ್ನು ಗುಣರಹಿತ ಭಾಗ (ಗುಣವಿಲ್ಲದ ಭಾಗ) ಎಂದು ಕರೆಯುತ್ತೇವೆ. ಈ ಮೂರು ಗುಣ ಭಾಗಗಳಲ್ಲಿಯೂ ಗುಣಗಳು ಇವೆ. ಒಂದೊಂದು ಭಾಗದಲ್ಲಿ 12 ಗುಣಗಳು ಇವೆ. ಅದರಲ್ಲಿ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು ಇವೆ. ಕೆಟ್ಟ ಗುಣಗಳು ವರಸೆಕ್ರಮದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂದು ಕರೆಯುತ್ತಾರೆ. ಒಳ್ಳೆಯ ಗುಣಗಳನ್ನು ವರಸೆಕ್ರಮವಾಗಿ ದಾನ, ದಯ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಎಂದು ಕರೆಯುತ್ತಾರೆ. ಕೆಟ್ಟ ಗುಣಗಳಲ್ಲಿ ಜೀವಿಯು ಸೇರಿದರೆ

ಪಾಪ ಬರುತ್ತದೆ. ಒಳ್ಳೆಯ ಗುಣಗಳಲ್ಲಿ ಜೀವಿಯು ಸೇರಿದರೆ ಪುಣ್ಯ ಬರುತ್ತದೆ. ಜೀವಿಯು ತಾಮಸ, ರಾಜಸ, ಸಾತ್ತ್ವಿಕ ಎನ್ನುವ ಮೂರು ಗುಣ ಭಾಗಗಳಲ್ಲಿ ತಿರುಗುತ್ತಿರುತ್ತಾನೆ. ಯಾವೊಂದು ಗುಣಭಾಗದಲ್ಲಿ ಕೂಡಾ ಶಾಶ್ವತವಾಗಿ ಇರುವುದಿಲ್ಲ. ಆದರೇ ಹೆಚ್ಚುಕಾಲ ಯಾವ ಗುಣದಲ್ಲಿ ಕಳೆದರೇ ಆ ಭಾಗವೊಂದರ ಹೆಸರು ಅವನಿಗೆ ಬರುತ್ತಿರುತ್ತದೆ. ತಾಮಸದಲ್ಲಿ ಹೆಚ್ಚುಕಾಲ ಇರುವವನನ್ನು ತಾಮಸನೆಂದು, ರಾಜಸದಲ್ಲಿ ಹೆಚ್ಚುಕಾಲ ಇರುವವನನ್ನು ರಾಜಸನೆಂದು, ಸಾತ್ತ್ವಿಕದಲ್ಲಿ ಹೆಚ್ಚುಕಾಲ ಇರುವವನನ್ನು ಸಾತ್ತ್ವಿಕನೆಂದು ಕರೆಯುತ್ತೇವೆ.

ಕೆಳಗೆ ಗುಣಚಕ್ರವಿರುವಾಗ ಅದರಮೇಲೆ ಕರ್ಮಚಕ್ರವಿರುತ್ತದೆ. ಗುಣಚಕ್ರದಲ್ಲಿನ ಜೀವಿಯು ಮಾಡಿಕೊಂಡ ಹಳೆ ಪಾಪಪುಣ್ಯಗಳನ್ನು ಕರ್ಮಚಕ್ರದಿಂದ ಆತ್ಮ ಅನುಭವಿಸುವಂತೆ ಮಾಡುತ್ತದೆ. ಹಾಗೆಯೇ ಪ್ರಸ್ತುತ ಕಾಲದಲ್ಲಿ ಮಾಡಿಕೊಂಡ ಪಾಪಪುಣ್ಯಗಳನ್ನು ಆತ್ಮವೇ ಕರ್ಮಚಕ್ರದಲ್ಲಿ ನಮೋದು ಮಾಡುತ್ತಿದೆ. ಗುಣಚಕ್ರಕ್ಕೆ ಮೇಲಿರುವ ಕರ್ಮಚಕ್ರದಿಂದ ಕರ್ಮ ಇಳಿದು ಅನುಭವಕ್ಕೆ ಬರುತ್ತಿದೆ. ಹಾಗೆಯೇ ಜೀವಿಯು ಹೊಸದಾಗಿ ಮಾಡಿಕೊಂಡ ಕರ್ಮ ಕರ್ಮಚಕ್ರದೊಳಗೆ ಏರುತ್ತಿದೆ. ದೇವರು ಏಳನೆ ಸ್ಥಾನ(ಏಳನೆ ಆಕಾಶ)ದಲ್ಲಿದ್ದು ಕೆಳಗೆ ಇಳಿಯುವ ಕರ್ಮವನ್ನು, ಮೇಲಕ್ಕೆ ಏರುವ ಕರ್ಮವನ್ನು ನೋಡುತ್ತಿದ್ದಾನೆ. ದೇವರು ಸಾಕ್ಷಿಯಾಗಿ ಮಾತ್ರ ಇದ್ದಾನೆ. ಎರಡನೆ ಆತ್ಮ ಮಾತ್ರ ಶರೀರದಲ್ಲಿ ಕಾರ್ಯಗಳೆಲ್ಲ ಮಾಡುತ್ತಿದೆ. ಪ್ರತಿ ವಿಷಯದಲ್ಲಿ ಜೀವಿಯನ್ನು ಕರ್ಮಬದ್ಧನನ್ನು ಮಾಡಿ ಕರ್ಮವನ್ನು ಅನುಸರಿಸಿ ನಡೆಸುತ್ತಿದೆ. ದೇವರು ಮಾತ್ರ ಏನು ಮಾಡದೆ ಇಳಿಯುವ ಕರ್ಮವನ್ನು ಏರುವ ಕರ್ಮವನ್ನು ನೋಡುತ್ತಿದ್ದಾನೆ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 34, ಆಯತ್ 2ರಲ್ಲಿ ಹೀಗಿದೆ ನೋಡಿರಿ. **(34-2) "ಭೂಮಿಯೊಳಗೆ ಹೋಗುವುದು, ಅದರಿಂದ ಹೊರಬೀಳುವುದು, ಆಕಾಶದಿಂದ ಇಳಿಯುವುದು, ಅದರೊಳಗೆ (ಆಕಾಶದೊಳಗೆ) ಹತ್ತಿ ಹೋಗುವುದು ಎಲ್ಲಾ ಆತನಿಗೆ (ದೇವರಿಗೆ) ಗೊತ್ತು. ಆತನು ಅಪಾರ ಕರುಣಾ ಪ್ರದಾತ, ಕ್ಷಮಾಶೀಲಿ"** ಎಂದು ಇದೆ.

ದೇವರ ಜ್ಞಾನದ ಪ್ರಕಾರವೇ ಕರ್ಮ ಜೀವಿಯ ಮೇಲಕ್ಕೆ ಇಳಿಯುವುದು, ಜೀವಿಯಿಂದ ಕರ್ಮಚಕ್ರದೊಳಗ ನಮೋದು ಆಗುವುದು, ಖಚಿತವಾಗಿ ನಾವು ದೃಶ್ಯರೂಪ ಮಾಡಿಕೊಂಡಿದ್ದೇವೆ. ಕರ್ಮಚಕ್ರದ ಮೇಲೆ ಕಾಲಚಕ್ರವಿದೆ. ಕಾಲ ಚಕ್ರದಲ್ಲಿ ಪ್ರತಿಯೊಂದಕ್ಕು ಕಾಲ ಗಡುವು ನಿರ್ಣಯಿಸಲ್ಪಟ್ಟಿರುತ್ತದೆ. ಕಾಲ ಚಕ್ರದಲ್ಲಿ ನಿರ್ಣಯಿಸಿದ ಕಾಲವೊಂದರ ಗಡುವಿನ ಪ್ರಕಾರ ಕೆಳಗೆ ಕರ್ಮ ಚಕ್ರದಲ್ಲಿನ ಕರ್ಮ ನಡೆಯುತ್ತಿರುತ್ತದೆ. ಆದ್ದರಿಂದ ಯಾವಾಗ ಮರಣಿಸಬೇಕಾದವನು ಆಗಲೇ ಮರಣಿಸುತ್ತಾನೆ. ನಡೆಯಬೇಕಾದ ಕಾರ್ಯಯಾವುದಾದರಾಗಲಿ ಒಂದು ಸೆಕೆಂಡು ಕೂಡಾ ವ್ಯತ್ಯಾಸವಿಲ್ಲದೆ ನಡೆಯುತ್ತದೆ. ಅದು ಕಾಲಚಕ್ರದೊಳಗಿನ ಕಾಲವೊಂದರ ನಿರ್ಣಯವನ್ನು ಯಾರೂ ಬದಲಾಯಿಸಲಾರರು. ಕಾಲಚಕ್ರವನ್ನು ಕೆಳಗೆ ದೃಶ್ಯರೂಪವಾಗಿ ನೋಡಿಕೊಳ್ಳೋಣ.




**ಕಾಲಚಕ್ರ**

ಕಾಲಚಕ್ರ ಒಟ್ಟು ಹನ್ನೆರಡು ಭಾಗಗಳಾಗಿದೆ. ಒಂದೊಂದು ಭಾಗ ಒಂದೊಂದು ಹೆಸರಿನಿಂದ ಇದೆ. ಪ್ರತಿ ಭಾಗದಲ್ಲಿ ಎರಡು ಗಂಟೆಗಳ ಕಾಲವಿರುತ್ತದೆ. ಆ ಕಾಲಚಕ್ರ, ಕರ್ಮಚಕ್ರ, ಗುಣಚಕ್ರ ಒಂದಕ್ಕೊಂದು ಸಂಬಂಧಹೊಂದಿದ್ದು ತಿರುಗುವುದರಿಂದ, ಬೇರೆ ಬೇರೇ ಸಮಯಗಳಲ್ಲಿ, ಬೇರೆ ಕರ್ಮಗಳನ್ನು, ಬೇರೆ ಬೇರೆ ಅನುಭವಗಳಾಗಿ ಜೀವಿಯು ಅನುಭವಿಸುತ್ತಿರುತ್ತಾನೆ. ದೇವರು ತನ್ನ ಜ್ಞಾನದ ಪ್ರಕಾರವೇ ಮನುಷ್ಯನನ್ನು ಸೃಷ್ಠಿಸಿ, ತನ್ನ ಜ್ಞಾನದ ಪ್ರಕಾರವೇ ನಡೆಯುವಂತೆ ಮಾಡಿದ್ದಾನೆ. ದೇವರು ಎಲ್ಲವನ್ನು ನೋಡುತ್ತಿದ್ದಾನೆ. ಆತನಿಗೆ ತಿಳಿಯದೇ ಏನು ನಡೆಯುವುದಿಲ್ಲ. ದೇವರ ಜ್ಞಾನ ಪರಮಾರ್ಥವನ್ನು, ನಿದರ್ಶನವನ್ನು ಪೂರ್ತಿ ದರ್ಶನವಾಗಿ ನೋಡಿಕೊಂಡರೆ ಕೆಳಗಿರುವ ಚಿತ್ರದಲ್ಲಿ ಚಿತ್ರಿಸಿದ ವಿಧವಾಗಿದೆ ನೋಡಿರಿ.



ಮನುಷ್ಯನ ಶರೀರದಲ್ಲಿ ಮನುಷ್ಯನಿಗೆ ಮೂಲವಾದ ಈ ಚಕ್ರ ಇರುವುದರಿಂದ, ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಮೊದಲ ಶ್ಲೋಕದಲ್ಲಿಯೇ **"ಉರ್ಥ್ವಮೂಲ"** ಎಂದು ಹೇಳಿದ್ದಾರೆ. ಆ ಮಾತಿಗೆ ಮೇಲೆ ಮೂಲವಿದೆಯೆಂದು ಅರ್ಥ.

ದೇವರ ಗ್ರಂಥಗಳಲ್ಲಿರುವ ದೇವರ ಜ್ಞಾನವನ್ನು ದೃಶ್ಯರೂಪ ಮಾಡಿಕೊಂಡರೆ ಅದು ದೇವರಿಗೆ ಸಂಬಂಧಿಸಿದ ಮುದ್ರೆಯಾಗುತ್ತದೆ. ರಾಜ ಶಾಸನಗಳಿಗೆ ಗುರುತಾಗಿ ರಾಜಮುದ್ರೆ ಇರುವಂತೆ, ದೇವರ ಧರ್ಮಗಳಿಗೆ ಗುರುತಾಗಿ **ದೇವರ ಮುದ್ರೆ ಅಥವಾ ದೇವರ ಚಿಹ್ನೆ** ಇದೆ. ದೇವರ ಚಿಹ್ನೆ, ದೇವರ ಜ್ಞಾನಕ್ಕೆ ಪ್ರತಿರೂಪವಾಗಿ ಇರುವುದರಿಂದ ಅದರಲ್ಲಿ ದೈವಶಕ್ತಿ ಇದೆಯೆಂದು ಹೇಳಬಹುದು. ದೈವಶಕ್ತಿ ಎಲ್ಲಿದೆಯೋ ಅಲ್ಲಿ ಕರ್ಮ ಸುಟ್ಟುಹೋಗುತ್ತದೆ. ಅಗ್ನಿ ಎಲ್ಲಿದ್ದರೆ ಅಲ್ಲಿ ಉರಿಯುವ ವಸ್ತುಗಳು ಯಾವಿದ್ದರೂ ಅಗ್ನಿಯಿಂದ ಸುಟ್ಟುಹೋಗುವಂತೆ, ದೈವಶಕ್ತಿ ಇರುವಕಡೆ ಯಾವ ಕರ್ಮಗಳಿದ್ದರೂ ಜ್ಞಾನಾಗ್ನಿಗೆ ಅಂಟಿಕೊಂಡು ಸುಟ್ಟುಹೋಗುತ್ತವೆ.

**ಪ್ರಶ್ನೆ :– ನೀವು ದೃಶ್ಯರೂಪವಾಗಿ ತೋರಿಸಿದ ದೇವರ ಚಿಹ್ನೆಗೆ ನಿಜವಾಗಲೂ ದೈವಶಕ್ತಿ ಇರುತ್ತದೆನ್ನುತ್ತೀರಾ?**

**ಉತ್ತರ :–** ದೈವಜ್ಞಾನದಲ್ಲಿ ಮುಖ್ಯವಾದವುಗಳಲ್ಲಿ 1) ಭೂಮಿ ಆಕಾಶಗಳ ಸೃಷ್ಟಿ ವಿಷಯ. 2) ಮೂರು ಆತ್ಮಗಳ ವಿಷಯ. 3) ಕರ್ಮವೊಂದರ ವಿಷಯ. 4) ಕಾಲ ನಿರ್ಣಯವೊಂದರ ವಿಷಯ ಜ್ಞಾನಗಳು ಇರುವುದರಿಂದ ದೇವರ ಗುರುತಿಗೆ ದೇವರ ಶಕ್ತಿ ಅಂಟಿಕೊಂಡಿರುತ್ತದೆ. ಈ ನಾಲ್ಕು ಜ್ಞಾನಗಳು ವಿನಹ ಆಧ್ಯಾತ್ಮಿಕ ಜ್ಞಾನವಿಲ್ಲ. ದೇವರ ಜ್ಞಾನದಲ್ಲಿ ಏನು ಹೇಳಿದರೂ ಈ ನಾಲ್ಕು ಅಂಶಗಳ ಜ್ಞಾನವೇ ಇರುತ್ತದೆ. ಆಧ್ಯಾತ್ಮಿಕ ಜ್ಞಾನದಲ್ಲಿ ಮೇಲಿನ ನಾಲ್ಕು ಜ್ಞಾನಗಳೇ ಮುಖ್ಯವಾದವುಗಳಾದ್ದರಿಂದ, ದೇವರ ಮುದ್ರೆಯಾಗಿ ತೋರಿಸಲ್ಪಟ್ಟ ಚಿತ್ರಕ್ಕೆ ಅಥವಾ ಆಕಾರಕ್ಕೆ ದೈವಶಕ್ತಿ ಇರುತ್ತದೆಂದು ಹೇಳುತ್ತಿದ್ದೇವೆ.

ಈಗ **"ದೇವರ ಚಿಹ್ನೆ"** ಎನ್ನುವ ಹೆಸರಿನಿಂದ ಅಲ್ಲದೇ **"ದೇವರ ಮುದ್ರೆ"** ಎನ್ನುವ ಹೆಸರಿನಿಂದ ಹೇಳುವ ವಿಧಾನವನ್ನು ನೋಡಿರಿ. ದೇವರ ಚಿಹ್ನೆಯಾಗಿರುವ ಗೊಂಬೆಯನ್ನು ನೋಡಿದ್ದೀರ ಅಲ್ಲವೆ! ಇಲ್ಲಿ ಅದೇ ಗೊಂಬೆಯನ್ನೆ ದೇವರ ಮುದ್ರೆಯಾಗಿ ಹೇಳುತ್ತಿದ್ದೇವೆ. ಮನುಷ್ಯರು ಆರಾಧಿಸಬೇಕಾದ ದೇವರು ಒಬ್ಬನೇ. ಅದೇ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಸೂರಾ ಮೂರರಲ್ಲಿ, ಆಯತ್ 18ರಲ್ಲಿ ಅಲ್ಲಾಹ್‌ನೇ ಸ್ವತಃವಾಗಿ **"ಈತನೇ ನೀವು ಆರಾಧಿಸಬೇಕಾದ ದೇವರು"** ಎಂದು ತನಗಿಂತ ಬೇರೆಯಾಗಿರುವವನನ್ನು ತೋರಿಸಿದ್ದಾನೆ. ಆರಾಧಿಸಬೇಕಾದ ದೇವರು ಒಬ್ಬನೇಯೆಂದು ಆ ಒಬ್ಬನನ್ನು ತೋರಿಸಿದವನು ಸ್ವತಃವಾಗಿ ಅಲ್ಲಾಹ್‌ನೇ. ಮುಸ್ಲೀಮ್‌ರು ಎಲ್ಲರೂ ಆರಾಧಿಸಬೇಕಾಗಿರುವುದು ಒಬ್ಬ ಅಲ್ಲಾಹ್‌ನನ್ನು ಮಾತ್ರವೇ ಅಲ್ಲವೆ! ಹಾಗಿರುವಾಗ ಅಲ್ಲಾಹ್ ಯಾರನ್ನು ತೋರಿಸಿದ್ದಾನೆ? ಎನ್ನುವ ವಿಷಯವನ್ನೇ ಇಲ್ಲಿಯವರೆಗು ಈ ಗ್ರಂಥದಲ್ಲಿ ವಿವರಿಸಿದ್ದೇವೆ. ಅಲ್ಲಾಹ್ ಮನುಷ್ಯರಿಗೆ ತಂದೆಯಾಗಿದ್ದಾನೆ ಮತ್ತು ತಾತನಾಗಿದ್ದಾನೆ. ತಾತನಾಗಿರುವ ಅಲ್ಲಾಹ್, ತಂದೆಯಾಗಿರುವ ಅಲ್ಲಾಹ್ ಇಬ್ಬರೂ ಒಂದೇ. ಆದರೇ ಅಲ್ಲಾಹ್ ಇನ್ನೂ ಹತ್ತಿರವಾಗಿ ಅರ್ಥವಾಗುವುದಕ್ಕೆ ಹಾಗೆ ಬಿಡಿಸಿ ತೋರಿಸಬೇಕಾಗಿ ಬಂದಿದೆ. ಪವಿತ್ರ ಖುರ್‌ಆನ್ ಗ್ರಂಥದಲ್ಲಿನ ಸೂರಾ 3, ಆಯತ್ 18ರಲ್ಲಿ ಅಲ್ಲಾಹ್ ಹೇಳಿದ ವಾಕ್ಯವನ್ನು ಮರೆಯಬಾರದು. ಜ್ಞಾನ ಸಂಪನ್ನರಾದವರು, ದೇವದೂತರು ಮತ್ತು **ಸ್ವತಃವಾಗಿ ಅಲ್ಲಾಹ್** ಹೇಳಿರುವುದು ಪ್ರತಿ ಮನುಷ್ಯ ತಪ್ಪದೇ ಒಪ್ಪಿಕೊಳ್ಳಬೇಕಾಗಿದೆ. ಯಾರಾದರೂ ಒಪ್ಪಿಕೊಳ್ಳದೆಹೋದರೆ ಅವನು ಅಲ್ಲಾಹ್ ಮಾತನ್ನೇ ಧಿಕ್ಕರಿಸಿದವನಾಗುತ್ತಾನೆ. ಆಗ ಅವನು ಅಲ್ಲಾಹ್‌ಗೆ (ದೇವರಿಗೆ) ಹೇಗೆ ವಿಶ್ವಾಸಿಯಾಗುತ್ತಾನೆ? ಅಲ್ಲಾಹ್ ಬಗ್ಗೆ ನಿಜವಾದ ವಿಶ್ವಾಸಿ ಯಾರಾದರೆ ಇದ್ದಾನೋ ಅವನು ತಪ್ಪದೇ ಅಲ್ಲಾಹ್ ಮಾತನ್ನು (ಆಯತ್‌ನ್ನು) ಕೇಳುತ್ತಾನೆ.

'ದೇವರ ಚಿಹ್ನೆ' ಗಿಂತ ಬೇರೆಯಾಗಿರುವುದು **'ದೇವರ ಮುದ್ರೆ'** ಎನ್ನುವ ಗ್ರಂಥ. ದೇವರ ಮುದ್ರೆ ಗ್ರಂಥದಲ್ಲಿನ ಪ್ರತಿ ವಿಷಯ ದೇವರ ಚಿಹ್ನೆಯಲ್ಲಿನ ವಿಷಯಕ್ಕಿಂತ ಬೇರೆಯಾಗಿ ಹೇಳುತ್ತಾ ಬಂದರೂ 'ದೇವರ ಚಿಹ್ನೆ' ಎನ್ನುವ ಚಿತ್ರ ಹಾಗೇ 'ದೇವರ ಮುದ್ರೆ' ಎನ್ನುವ ಚಿತ್ರ ಎರಡೂ ಒಂದೇ. ಆದರೇ ದೇವರ ಚಿಹ್ನೆಯ ಚಿತ್ರಪಟವನ್ನು ಆ ಗ್ರಂಥದಲ್ಲಿ ಹೇಗಿರುವುದು ಈ ಗ್ರಂಥದಲ್ಲಿ ತೋರಿಸಿದ್ದೇವೆ. ದೇವರ ಚಿಹ್ನೆ ಗೊಂಬೆಯನ್ನು ಅದಕ್ಕೆ ಸಂಬಂಧಿಸಿದ ಸಮಾಚಾರವನ್ನು ಆ ಗ್ರಂಥದಿಂದ ತೆಗೆದು ತೋರಿಸಿದ್ದೇವೆ. ಹಾಗೆ ತೋರಿಸುವುದರಿಂದ ದೇವರ ಮುದ್ರೆ, ದೇವರ ಚಿಹ್ನೆ ಎರಡೂ ಒಂದೇಯೆಂದು ಪ್ರತ್ಯಕ್ಷವಾಗಿ ಅರ್ಥವಾಗುತ್ತದೆ. 'ದೇವರ ಚಿಹ್ನೆ' ಎನ್ನುವ ಗ್ರಂಥದಿಂದ ದೇವರ ಚಿಹ್ನೆವೊಂದರ ಚಿತ್ರವನ್ನು ತೋರಿಸುವುದಲ್ಲದೆ ಅದರಲ್ಲಿನ ಸ್ವಲ್ಪ ಸಮಾಚಾರವನ್ನು ಕೂಡಾ ನೋಡಿದ್ದಾರೆ. ಆ ಸಮಾಚಾರ ಇಲ್ಲಿಯವರೆಗು ಬರೆದ ದೇವರ ಮುದ್ರೆ ಗ್ರಂಥದಲ್ಲಿನ ಸಮಾಚಾರ ಎಲ್ಲಾ ಪ್ರತ್ಯೇಕವಾಗಿರುವಂತೆ ತಿಳಿದುಹೋಗಿದೆ. ಸಮಾಚಾರ ಹೇಗೆ ಪ್ರತ್ಯೇಕವಾಗಿದೆಯೋ ಹಾಗೇ ದೇವರ ಚಿತ್ರಪಟವೊಂದರ ಅರ್ಥ ಕೂಡಾ ಬೇರೆಯಾಗಿರುತ್ತದೆ. ಈಗ ದೇವರ ಮುದ್ರೆ ಒಂದರ ವಿವರವನ್ನು ತಿಳಿದುಕೊಳ್ಳೋಣ.

**ಸೃಷ್ಠಿ ಆದಿಯಲ್ಲಿ ಮೊಟ್ಟಮೊದಲು ದೇವರು ಎಷ್ಟು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ**? ಎನ್ನುವ ಪ್ರಶ್ನೆಗೆ ಬಹಳಜನ ಮೂರು ಭಾಗಗಳೆಂದು ಜೀವಾತ್ಮ, ಆತ್ಮ, ಪರಮಾತ್ಮಯೆಂದು ಬರೆದಿದ್ದಾರೆ. ದೇವರು ಮೂರು ಆತ್ಮಗಳಾಗಿ ತಯಾರಾಗಿರುವುದು ವಾಸ್ತವವೇ. ಆದರೇ ಮೊದಲು ಪ್ರಪಂಚ ತಯಾರಾದ ನಂತರ ದೇವರು ಮೂರು ಆತ್ಮಗಳಾಗಿ ಸೀಳಿಹೋಗಿದ್ದಾನೆ. ಆದ್ದರಿಂದ ಮೊಟ್ಟಮೊದಲು ದೇವರಿಂದ ಪ್ರಪಂಚ ಎನ್ನುವ ಪ್ರಕೃತಿ ಹೊರಗೆ ಬಂದಿದೆ. ಪ್ರಕೃತಿಯಿಂದ ಪಂಚಭೂತ ನಿರ್ಮಿತವಾದ ಪ್ರಪಂಚ ಏರ್ಪಟ್ಟ ನಂತರ ದೇವರಿಂದ ಎರಡು ಆತ್ಮಗಳು ಹೊರಗೆ ಬಂದಿವೆಯೆಂದು, ಆ ವಿಧವಾಗಿ ಮೊಟ್ಟಮೊದಲು ದೇವರು ನಾಲ್ಕು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು, ಗ್ರಂಥದ

ಪ್ರಾರಂಭದಲ್ಲಿಯೇ ಹೇಳಿಕೊಂಡಿದ್ದೇವೆ. ಮೊದಲು ಹುಟ್ಟಿದ ಪ್ರಕೃತಿ ಮೂರು ಆತ್ಮಗಳ ನಿವಾಸಕ್ಕೆ ಆಧಾರವಾಗಿದೆ. ಒಂದು ಪಾತ್ರೆಯನ್ನು ಉದಾಹರಣೆಯಾಗಿ ಹೇಳಿಕೊಂಡು ಮೊದಲು ಪಾತ್ರೆ ತೆಗೆದುಕೊಂಡು ಅದರಲ್ಲಿ ಮೂರು ವಿಧಗಳ ನೀರನ್ನು ಹಾಕಿದ್ದೇವೆ. ಆ ಮೂರು ವಿಧಗಳ ನೀರಿಗೆ ಪಾತ್ರೆ ಆಧಾರವಾಗಿ ಇದೆಯೆಂದು ಹೇಳಿಕೊಂಡಿದ್ದೇವೆ. ಅದನ್ನು ದೃಶ್ಯರೂಪದಲ್ಲಿ ಚಿತ್ರಿಸಿಕೊಂಡು ನೋಡೋಣ. ದೇವರಿಂದ ಹೊರಬಂದ ಮೊದಲ ಭಾಗವಾದ ಪ್ರಕೃತಿಯನ್ನು ನಂತರ ಪುಟದಲ್ಲಿ ಚಿತ್ರರೂಪ ನೋಡಿರಿ.




ಮೊದಲು ಪ್ರಕೃತಿ ತಯಾರಾಗಿದ್ದು ಅದು ಮೂರು ಆತ್ಮಗಳಿಗೆ ನಿಲಯವಾಗದ ಮೊದಲೇ ಪ್ರಕೃತಿ ಏಳು ಬಣ್ಣಗಳಾಗಿ ಕಾಣಿಸಿದೆ. ಅದನ್ನೇ ಇಂದ್ರಧನಸ್ಸು ಬಣ್ಣಗಳೆಂದು ಈದಿನ ಪ್ರತ್ಯಕ್ಷವಾಗಿ ಕಾಣಿಸುವ ಬಣ್ಣಗಳನ್ನು ಹೇಳುತ್ತಿರುತ್ತೇವೆ. ಇಂದ್ರಧನಸ್ಸಿನಲ್ಲಿ ಏಳು ಬಣ್ಣಗಳು ಇರುವುದು ಸಹಜ.

ಏಳು ಬಣ್ಣಗಳನ್ನನುಸರಿಸಿ ಏಳು ದಿನಗಳ ಹೆಸರುಗಳನ್ನು ತಯಾರು ಮಾಡುವುದು ನಡೆದಿದೆ. ಜೀವಾತ್ಮ ಆತ್ಮ ತಯಾರಾಗದ ಮುನ್ನವೇ ದೇವರು ಕಾಲಸ್ವರೂಪನಾಗಿ ಇರುವುದರಿಂದ ಪ್ರಕೃತಿ ಹುಟ್ಟಿದಾಗಲೇ ಕಾಲವಿದೆ. ಆದಿಯಲ್ಲಿ ಪ್ರಕೃತಿ ಹುಟ್ಟಿದಾಗಿರುವ ದೇವರು ಕಾಲವಾಗಿರುತ್ತಾ ಪ್ರಕೃತಿಯಲ್ಲಿ ಏಳು ಹೆಸರುಗಳಾಗಿ ಕರೆಯಲ್ಪಟ್ಟಿದ್ದಾನೆ. ಆ ಏಳು ಹೆಸರುಗಳೇ ಏಳು ವಾರಗಳಾಗಿ ನಮಗೆ ಪರಿಚಯವಾಗಿವೆ. ಇದನ್ನನುಸರಿಸಿ ಪ್ರಕೃತಿ ಹುಟ್ಟಿದ ನಂತರ ಯಾವ ಜೀವರಾಶಿ ಹುಟ್ಟದಮುನ್ನವೇ ಕಾಲವಿದೆ, ಕಾಲಕ್ಕೆ ಏಳು ವಾರಗಳ ಹೆಸರುಗಳು ಇವೆ. ಕಾಲ ಭಾನುವಾರದಿಂದ ಆರಂಭವಾಗಿದೆ. ಮೊದಲು ಪ್ರಕೃತಿ, ನಂತರ ಜೀವಿಗಳ ಉತ್ಪತ್ತಿ ಆತ್ಮದೊಂದಿಗೆ ಸಹ ನಡೆದಿದೆ. ಜೀವಿಗಳ ಮೊದಲ ಜನ್ಮದಿನ ಭಾನುವಾರವೇಯೆಂದು (ಆದಿವಾರ) ತಿಳಿಯಬೇಕು. ಆದ್ದರಿಂದ ಜೀವರಾಶಿಗಳು ಭಾನುವಾರದಿಂದ ಮೊದಲಾಗಿವೆಯೆಂದು ಹೇಳುತ್ತಿದ್ದೇವೆ. ಆದಿವಾರ ದಿನದಂದು ಜೀವಿಗಳ ಉತ್ಪತ್ತಿ ಪ್ರಾರಂಭವಾಗಿದೆ. ಆದ್ದರಿಂದ ದೃಶ್ಯರೂಪದಲ್ಲಿರುವ ಪ್ರಕೃತಿ, ಆಕಾರ ಚಿತ್ರದಲ್ಲಿ ಏಳು ವಾರಗಳನ್ನು ಗುರುತಿಸುವುದು ನಡೆದಿದೆ. ಮನುಷ್ಯನ ಶರೀರದಲ್ಲಿ ಪ್ರಕೃತಿಯೆನ್ನುವ ಚಕ್ರ ಇರುವಾಗ, ಮೇಲೆ ಪ್ರಕೃತಿ ಚಕ್ರ ಎರಡು ಭಾಗಗಳಾಗಿ ಚರ, ಅಚರ ಪ್ರಕೃತಿಯೆಂದು ತಯಾರಾಗಿದೆ. ಶಿರಸ್ಸಿನಲ್ಲಿನ ಮೆದುಳು ಎರಡು ಭಾಗಗಳಾಗಿದೆ. ಶರೀರ ಪ್ರಕೃತಿಯಿಂದ ತಯಾರಾಗಿದೆ ಆದ್ದರಿಂದ ಮೆದುಳು ಎರಡು ಭಾಗಗಳಾಗಿ, ಎರಡು ಭಾಗಗಳ ಚಕ್ರದಂತೆ ಕಾಣಿಸುತ್ತಿದೆ. ಎರಡು ಭಾಗಗಳಾಗಿರುವ ಮೆದುಳಿನಿಂದ ಪ್ರಾರಂಭವಾದ ಬ್ರಹ್ಮನಾಡಿ ಎನ್ನುವ ನರ ಮೇಲಿನಿಂದ ಕೆಳಗಿನವರೆಗು ಏಳು ಭಾಗಗಳಾಗಿರುವ ವಿಷಯ ಎಲ್ಲರಿಗೂ ತಿಳಿದಿರುವುದೇ.

ಸೃಷ್ಠಿ ಆದಿಯಲ್ಲಿ ಪರಮಾತ್ಮನಿಂದ ಪ್ರಕೃತಿ ಹುಟ್ಟಿದಾಗ ಪರಮಾತ್ಮ, ಪ್ರಕೃತಿ ಎರಡು 'ನಾಟಕ' ಎನ್ನುವ ಆಟದೊಳಗೆ ಒಂದು ಪಕ್ಕಕ್ಕೇ ಸರಿಹೋಗುತ್ತಾರೆ. ಆದ್ದರಿಂದ ಎರಡನೆ ಕಡೆ ಇಬ್ಬರು ಇರುವಂತೆ ತಿಳಿದ ಪರಮಾತ್ಮ ಆತ್ಮವನ್ನು, ಜೀವಾತ್ಮವನ್ನು ತನ್ನಿಂದ ಹೊರಗೆ ತೆಗೆದಿದ್ದಾನೆ. ಆಗ ಒಟ್ಟು ನಾಲ್ವರು ಕಾಣಿಸಿದ್ದಾರೆ.

ಮೂರು ಆತ್ಮಗಳು ಒಂದು ಪ್ರಕೃತಿ ತಯಾರಾಗಿದೆ. ಮೊದಲು ತಯಾರಾದ ಪ್ರಕೃತಿ ದೇವರ ಮುದ್ರೆ ಎನ್ನುವ ಗೊಂಬೆಯಲ್ಲಿ ಅಥವಾ ಚಿತ್ರಪಟದಲ್ಲಿ ಮೇಲ್ಭಾಗದಲ್ಲಿ ಎರಡು ಭಾಗಗಳಾಗಿ ಚರ, ಅಚರ ಪ್ರಕೃತಿಯಾಗಿದೆ. ಅದರ ಕೆಳಗೆ ಪರಮಾತ್ಮ ಅವಿತು ಕೊಂಡಂತೆ ಪ್ರಕೃತಿ ಹಿಂಬದಿಯ ಭಾಗದಲ್ಲಿ ಅಂದರೇ ಪ್ರಕೃತಿಯೆನ್ನುವ ಚಕ್ರದ ಕೆಳಗೆ ಎರಡನೆ ಚಕ್ರವಾಗಿ ಬೆರೆತುಹೋಗಿದೆ. ಪ್ರಕೃತಿಯಾಗಲಿ, ಪರಮಾತ್ಮವಾಗಲಿ ಒಂದುಕಡೆ ನಿಲ್ಲುವವರಲ್ಲ. ಎಂದಿಗೂ ಚಕ್ರದಂತೆ ಮುಂದಕ್ಕೆ ಉರುಳುತ್ತಾ ಹೋಗುತ್ತಿರುತ್ತಾರೆ. ಇವು ಎರಡು ಎಷ್ಟು ಕಾಲವಾದರೂ ಉರಳಬಹುದು, ಎಷ್ಟು ಕಾಲವಾದರೂ ಕಳೆಯಬಹುದು. ಒಂದುಕಡೆ ನಿಲ್ಲುವವು ಅಲ್ಲ ಆದುದರಿಂದ ಪ್ರಕೃತಿಯನ್ನು, ಪರಮಾತ್ಮನನ್ನು ಚಕ್ರದಂತೆ ಚಿತ್ರಪಟದಲ್ಲಿ ತೋರಿಸುವುದು ನಡೆದಿದೆ. ಕಾಲಗಮನದಿಂದ (ಚಲನೆಯಿಂದ) ಕೂಡಿಕೊಂಡಿದೆ. ಆದ್ದರಿಂದ ಪ್ರಕೃತಿ, ಪರಮಾತ್ಮ ಯಾವಾಗಲೂ ಮುಂದಕ್ಕೆ ಹೋಗುವ ಗಮನಿಗ ರಾಗಿ ಹೇಳಲ್ಪಡುತ್ತಿರುತ್ತಾರೆ. ಆದ್ದರಿಂದ ಇವರನ್ನು ಚಕ್ರಗಳಾಗಿಯೇ ಚಿತ್ರಿಸುವವುದು ನಡೆದಿದೆ. ಈ ವಿಷಯಕ್ಕೆ ಸಂಬಂಧಿಸಿದ ಸಮಾಚಾರ ಭಗವದ್ಗೀತೆ ರಾಜವಿದ್ಯಾ ರಾಜ ಗುಹ್ಯ ಯೋಗದಲ್ಲಿ 10ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**ಶ್ಲೋ॥ 10. ಮಯಾಧ್ಯಕ್ಷೇಣ ಪ್ರಕೃತಿ ಸ್ಸೂಯತೇ ಸಚರಾಚರಮ್ ।**
**ಹೇತುನಾ ನೇನ ಕೌಂತೇಯ! ಜಗ ದ್ವಿಪರಿವರ್ತತೇ॥**

**ಭಾವಾರ್ಥ :– "ಪ್ರಕೃತಿಗೆ ನಾನು ಅಧ್ಯಕ್ಷತೆ ವಹಿಸುವುದರಿಂದ ಪ್ರಪಂಚದಲ್ಲಿ ಜೀವರಾಶಿಗಳೆಲ್ಲವೂ ಹುಟ್ಟುತ್ತಿವೆ. ನಾನು ಆಧಾರವಾಗಿ ಇರುವಾಗ ಪ್ರಕೃತಿ ಚಕ್ರದಲ್ಲಿ ಸಾವುಹುಟ್ಟುಗಳ ಜಗತ್ತು ಚಕ್ರದಂತೆ ತಿರುಗುತ್ತಿದೆ."**

ಪರಮಾತ್ಮ ಪ್ರಕೃತಿಕೆಳಗೆ ಮರೆಯಿಂದ ದೇವರ ಮುದ್ರೆಯೆನ್ನುವ ಚಿತ್ರಪಟದಲ್ಲಿ ಕಾಣಿಸುತ್ತಿರುವುದನ್ನು ಪ್ರತ್ಯಕ್ಷ ಗೊಂಬೆಯಾಗಿ ನೋಡೋಣ. ಹಾಗೆ ದೃಷ್ಟಿಯಿಂದ ನೋಡುವುದರಿಂದ ಸ್ವಲ್ಪಮಟ್ಟಿಗೆ ದೇವರ ವಿಧಾನ

ಮನುಷ್ಯನಿಗೆ ಅರ್ಥವಾಗಬಹುದು. ಆದಿವಾರ ಬ್ರಹ್ಮನಾಡಿಯಲ್ಲಿ ಎಲ್ಲಿ ಇದೆಯೋ ಅಲ್ಲಿಯೇ ಪ್ರಕೃತಿ ಚಕ್ರ ಇದೆ. ಹಾಗೇ ಸೋಮವಾರ ಎಲ್ಲಿದೆಯೋ ಅಲ್ಲಿಯೇ ಪರಮಾತ್ಮ ಚಕ್ರ ಇದೆ.

ದೇವರ ಮುದ್ರೆಯಲ್ಲಿ ಎರಡು ಚಕ್ರಗಳನ್ನು ನೋಡಬಹುದು. ದೇವರ ಮುದ್ರೆ ಒಟ್ಟು ನಾಲ್ಕು ಚಕ್ರಗಳಿರುವ ಚಿತ್ರಪಟ ಆದರೇ ಪ್ರಕೃತಿ ಪರಮಾತ್ಮರ ವರೆಗು ಹಾಗೆ ಇರುತ್ತಿತ್ತು. ಸೃಷ್ಠಿ ಕಾರ್ಯದಲ್ಲಿ ತಕ್ಷಣ ಪರಮಾತ್ಮನಿಂದ ಆತ್ಮ, ಆತ್ಮದಿಂದ ಜೀವಾತ್ಮ ಹೊರಗೆ ಬರುವುದು ನಡೆದಿದೆ. ಆ ಎರಡು ಆತ್ಮಗಳು ಎರಡು ಚಿತ್ರಗಳಾಗಿ ತಯಾರಾಗಿ ಪ್ರಕೃತಿ ಸಂಬಂಧ ಬ್ರಹ್ಮನಾಡಿಯನ್ನು ಆಶ್ರಯಿಸಿವೆ. ಆಗ ನೂಡುವ ದೃಶ್ಯ ನಂತರ ಪುಟದಲ್ಲಿ ತೋರಿಸಲ್ಪಟ್ಟಿದೆ ನೋಡಿರಿ.




ಈ ವಿಧವಾಗಿ ದೇವರ ಮುದ್ರೆ ತಯಾರು ಮಾಡಲ್ಪಟ್ಟಿದೆ. ದೇವರ ಚಿಹ್ನೆಯಲ್ಲಿ ಮೇಲಿಂದ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳು ದೃಶ್ಯರೂಪವಾಗಿ




ಇರುವಾಗ ದೇವರ ಮುದ್ರೆಯಲ್ಲಿ ಮೇಲಿಂದ ಪ್ರಕೃತಿ, ಪರಮಾತ್ಮ, ಆತ್ಮ, ಜೀವಾತ್ಮಗಳು ನಾಲ್ಕು ಚಕ್ರಗಳಾಗಿ ದೃಶ್ಯರೂಪವಾಗಿವೆ. ದೇವರ ಚಿಹ್ನೆ, ದೇವರ ಮುದ್ರೆಯಲ್ಲಿನ ವ್ಯತ್ಯಾಸಗಳನ್ನು ಗಮನಿಸಬೇಕು.

ದೇವರ ಚಿಹ್ನೆಯಲ್ಲಿ ನಾಲ್ಕು ಚಕ್ರಗಳ ಹೆಸರುಗಳು ಮೇಲಿಂದ ಕೆಳಗೆ ವರಸೆಕ್ರಮವಾಗಿ **ಬ್ರಹ್ಮಚಕ್ರ, ಕಾಲಚಕ್ರ, ಕರ್ಮಚಕ್ರ, ಗುಣಚಕ್ರ** ಎಂದು ಹೇಳುತ್ತಿದ್ದೇವೆ. ಅದೇ ಚಿತ್ರಪಟವನ್ನೇ ದೇವರ ಮುದ್ರೆಯಾಗಿಯೇ ಹೇಳಿದರೆ ದೇವರ ಮುದ್ರೆಯಲ್ಲಿ ಕೂಡಾ ಅದೇ ಚಿತ್ರಪಟವಿದ್ದರೂ, ಅದರಲ್ಲಿ ಕೂಡಾ ನಾಲ್ಕು ಚಕ್ರಗಳಿದ್ದರೂ, ಆ ನಾಲ್ಕು ಚಕ್ರಗಳನ್ನು ಮೇಲಿಂದ ಕೆಳಗೆ ವರಸೆಕ್ರಮವಾಗಿ ಹೀಗೆ ಹೇಳಬಹುದು. ಮೇಲೆ ಇರುವುದು ಪ್ರಕೃತಿಗೆ ಗುರುತು, ನಂತರ ಇರುವುದು ಪರಮಾತ್ಮಗೆ ಗುರುತು, ಆ ನಂತರ ಮೂರನೆಯದು ಆತ್ಮಗೆ ಗುರುತು, ಕೊನೆಯಲ್ಲಿ ಕೆಳಗಿರುವ ನಾಲ್ಕನೆ ಚಕ್ರ ಜೀವಾತ್ಮಗೆ ಗುರುತಾಗಿ ಇದೆ. ಬ್ರಹ್ಮನಾಡಿ ಶರೀರಕ್ಕೆ (ಪ್ರಕೃತಿಗೆ) ಗುರುತಾಗಿ ಇದೆಯೆಂದು ಹೇಳಬಹುದು. ಇಲ್ಲಿ ದೇವರ ಮುದ್ರೆಯಾಗಿರುವ

ನಾಲ್ಕುಚಕ್ರಗಳನ್ನು ಆಳವಾಗಿ ಗಮನಿಸಿದರೆ ಮೇಲಕ್ಕಿರುವ ಪ್ರಕೃತಿ ಚಕ್ರ, ಚರ ಅಚರ ಪ್ರಕೃತಿ ಎನ್ನುವ ಎರಡು ಭಾಗಗಳಾಗಿ ಇದೆ. ಅದಕ್ಕಿಂತ ಕೆಳಗೆ ಪರಮಾತ್ಮ ಗುರುತಾದ ಎರಡನೆ ಚಕ್ರ 12 ಭಾಗಗಳಾಗಿ ಇದೆ. ಅದೇ ದೇವರ ಚಿಹ್ನೆಯಲ್ಲಿ ಕಾಲಚಕ್ರವಾಗಿ ಹೇಳಲ್ಪಟ್ಟಿದೆ. ಅದರಲ್ಲಿನ 12 ಭಾಗಗಳನ್ನು ಹನ್ನೆರಡು ತಿಂಗಳುಗಳಿಗೆ ಗುರುತಾಗಿ ಹೇಳಿಕೊಂಡಿದ್ದೇವೆ. ಇಲ್ಲಿ ಅದೇ ಚಕ್ರವೇ ದೇವರ ಮುದ್ರೆ ಹೆಸರಿನಲ್ಲಿ ಪರಮಾತ್ಮಗೆ ಗುರುತಾಗಿ ಹೇಳಲ್ಪಟ್ಟಿದೆ. ಅದಕ್ಕಿಂತ ಕೆಳಗಿರುವ ಮೂರನೆ ಚಕ್ರ ಆತ್ಮಕ್ಕೆ ಗುರುತಾಗಿ ಹೇಳುವುದಾಗಿದೆ. ಪರಮಾತ್ಮ ಗುರುತಾಗಿರುವ ಎರಡನೆ ಚಕ್ರ, ಆತ್ಮಗೆ ಗುರುತಾಗಿರುವ ಮೂರನೆ ಚಕ್ರ ಎರಡೂ 12 ಭಾಗಗಳಾಗಿ ಇರುವುದು ತಿಳಿದ ವಿಷಯವೇ. ಈ ಹನ್ನೆರಡು ಭಾಗಗಳು ದೇವರ ಚಿಹ್ನೆಯಲ್ಲಿ ಕಾಲ, ಕರ್ಮಚಕ್ರಗಳ ವಿಭಜನೆಯ ಪ್ರಕಾರ ಕಾಲ ಚಕ್ರದಲ್ಲಿನ ಹನ್ನೆರಡು ಭಾಗಗಳು ಹನ್ನೆರಡು ತಿಂಗಳುಗಳಿಗೂ, ಕರ್ಮಚಕ್ರದಲ್ಲಿನ ಹನ್ನೆರಡು ಭಾಗಗಳು ಮನುಷ್ಯನೊಂದರ ಹನ್ನೆರಡು ಕರ್ಮ ರಾಶಿಗಳಿಗು ಸರಿಹೋಗುವ ವಿಭಜನೆಯಾಗಿ ಇವೆ. ಅದೇ ದೇವರ ಮುದ್ರೆಯಲ್ಲಿ ಪರಮಾತ್ಮ, ಆತ್ಮ ಎರಡು ಚಕ್ರಗಳಲ್ಲಿ ಮೇಲೆ ಕೆಳಗೆ ಹನ್ನೆರಡು ಭಾಗಗಳು ಇರುವುದರಿಂದ ಪರಮಾತ್ಮನಿಗೆ ಸಮಾನವಾದವನು ಆತ್ಮಯೆಂದು ತಿಳಿಯಲ್ಪಡಿಸಲಾಗುತ್ತಿದೆ. ದೇವರು ಸ್ವತಃವಾಗಿ ತನ್ನಂತೆ ತನ್ನ ಆತ್ಮವನ್ನು ಅಧಿಕಾರಿಯಾಗಿ ನಿರ್ಣಯಿಸಿದ್ದಾನೆ. ಆದ್ದರಿಂದ ಮೇಲಿರುವ ಭಾಗಗಳೇ ಕೆಳಗಿವೆಯೆಂದು ಅರ್ಥ ಮಾಡಿಕೊಳ್ಳಬಹುದು.

ಒಂದು ಸಂಪೂರ್ಣ ಬಿಂದುವು 360 ಡಿಗ್ರಿಗಳ ಕೋನದಲ್ಲಿ ಇರುತ್ತದೆ. ಅಂದರೇ ಒಂದು ಚಕ್ರ ಆಕಾರ ಯಾವುದಾದರೂ 360 ಡಿಗ್ರಿಗಳ ವೃತ್ತವಾಗಿರುತ್ತದೆ. ದೇವರಾದ ಪರಮಾತ್ಮನನ್ನು ಒಂದು ಚಕ್ರವಾಗಿ ತೋರಿಸುವುದಾಗಿದೆ. ಆ ಚಕ್ರವನ್ನು ಎಂದರೇ ಆ ವೃತ್ತಯನ್ನು 30 ಡಿಗ್ರಿಗಳ ಕೊನವಾಗಿ 12 ಭಾಗಗಳನ್ನು ಮಾಡುವುದರಿಂದ 360 ಡಿಗ್ರಿಗಳ ಕೋನ ಸರಿಹೋಗುತ್ತಿದೆ. ದೇವರು ಮೂಡು ಆತ್ಮಗಳಾಗಿ ಇರುವುದರಿಂದ ಮೂರು ಹತ್ತುಗಳ ಡಿಗ್ರಿಗಳನ್ನು ಒಂದು ಕೋನವಾಗಿ ವಿಭಜಿಸಿ 12 ಭಾಗಗಳನ್ನು ಮಾಡಿ 12x30=360 ಡಿಗ್ರಿಗಳ ವೃತ್ತವು

ಸರಿಹೋಗುವಂತೆ ಇವೆಯೆಂದು ಹೇಳಬಹುದು. ಮೇಲಿರುವ ಪರಮಾತ್ಮ ಚಕ್ರ, ಕೆಳಗಿರುವ ಆತ್ಮಚಕ್ರ ಎರಡೂ ಸಮಾನ ಭಾಗಗಳಾಗಿ ಇರುವುದರಿಂದ ಎರಡೂ ಸಮಾನವಾಗಿ ಇದೆಯೆಂದು ಹೇಳಬಹುದು. ನೋಡುವುದಕ್ಕೂ, ಹೇಳುವುದಕ್ಕೂ ಬೇರೆ ಬೇರೆ ಚಕ್ರಗಳಾಗಿ ಇದ್ದರೂ ಎರಡೂ ಒಂದಾಗಿಯೇ ಇವೆ. ಎರಡೂ ಒಂದೇ ಅಧಿಕಾರವನ್ನು ಹೊಂದಿವೆ. ಎರಡೂ ಎಲ್ಲವುದರಲ್ಲಿ ಸಮಾನ ಅಧಿಕಾರ ಇರುವವಾಗಿ ಇರುವುದರಿಂದ ಎರಡನ್ನು ಒಂದಾಗಿ ಹೇಳಬಹುದು. ಆದ್ದರಿಂದ ಇಂಜೀಲ್ (ಬೈಬಲ್) ಜ್ಞಾನದಲ್ಲಿ ಯೋಹಾನ್ ಸುವಾರ್ತೆ 10ನೇ ಅಧ್ಯಾಯದಲ್ಲಿ 30ನೇ ವಚನದಲ್ಲಿ ಹೀಗೆ ಹೇಳಲ್ಪಟ್ಟಿದೆ ನೋಡಿರಿ.

**(ಯೋಹಾನ್ 10-30) "ನಾನೂ ನನ್ನ ತಂದೆಯು ಏಕವಾಗಿದ್ದೇವೆಂದು ಅವರೊಂದಿಗೆ ಹೇಳಿದನು".**

ಈ ವಾಕ್ಯವನ್ನು ಗಮನಿಸಿದರೇ ನನ್ನ ತಂದೆ (12) ಹನ್ನೆರಡು ಆದರೆ ನಾನು ಹನ್ನೆರಡಾಗಿಯೇ ಇದ್ದೇನೆಂದು, "ನಾನು ತನ್ನ ತಂದೆ ಏಕವಾಗಿದ್ದೇವೆ" ಎಂದಿದ್ದಾನೆ, "ಒಂದಾಗಿಯೇ ಇದ್ದೇವೆ" ಎಂದು ಹೇಳಿದ್ದಾನೆ. ಮಧ್ಯದಲ್ಲಿ ಎರಡು ಚಕ್ರಗಳಾಗಿರುವ ತಂದೆ ಕುಮಾರನು ಇಬ್ಬರೂ ಸಮಾನವಾಗಿ ಇರುವುದರಿಂದ ಎರಡು ಚಕ್ರಗಳಲ್ಲಿ ಹನ್ನೆರಡು ಭಾಗಗಳನ್ನೇ ತೋರಿಸಿದ್ದಾರೆ. ಕೆಳಗೆ ನಾಲ್ಕನೆ ಚಕ್ರ ಜೀವಾತ್ಮಕ್ಕೆ ಗುರುತಾಗಿ ಇದೆ. ಕೆಳಗಿರುವ ಜೀವಾತ್ಮ ಮೇಲೆ ಮೋಕ್ಷವಾಗಿರುವ ಪರಮಾತ್ಮವನ್ನು ಸೇರಬೇಕೆಂದರೇ ಮಧ್ಯದಲ್ಲಿರುವ ಆತ್ಮಚಕ್ರದ ಮೂಲಕವೇ ಹೋಗಬೇಕಾಗಿದೆ. ಆದ್ದರಿಂದ ಇಂಜೀಲ್‌ನಲ್ಲಿ ಯೋಹಾನ್ 14ನೇ ಅಧ್ಯಾಯ ಆರನೆ ವಾಕ್ಯದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ. (ಯೋಹಾನ್ 14–6) **" ಯೇಸು ನಾನೇ ಮಾರ್ಗವು, ಸತ್ಯವು, ಜೀವವು, ನನ್ನ ಮುಖಾಂತರವೇ ಹೊರತು ಯಾರು ತಂದೆಯ ಹತ್ತಿರಕ್ಕೆ ಬರುವುದಿಲ್ಲ."** ಇಲ್ಲಿ ದೇವರ ಮುದ್ರೆ ಚಿತ್ರಪಟವನ್ನು ನೋಡಿದರೆ ಈ ವಾಕ್ಯಕ್ಕೆ ಸರಿಪಡುವ ಜ್ಞಾನ ಇದೆಯೆಂದು ತಿಳಿಯುತ್ತಿದೆ. ದೇವರ ಚಿಹ್ನೆ ಎನ್ನುವ ಚಿತ್ರಪಟವನ್ನು ಭಗವದ್ಗೀತೆ

ಯಿಂದ ಗ್ರಹಿಸಿ ನಾವು ಸುಮಾರು 40 ವರ್ಷಗಳ ಕೆಳಗೇ ಬರೆದಿದ್ದೇವೆ. ಆ ದೇವರ ಚಿಹ್ನೆಯನ್ನು ಕುರಿತು ಎರಡು ಆಯತ್‌ಗಳಲ್ಲಿ (5–2), (22–32) ಪ್ರತ್ಯಕ್ಷವಾಗಿ "ದೇವರ ಚಿಹ್ನೆ" ಎಂದು ಹೆಸರಿಟ್ಟು ಹೇಳುವುದಾಗಿದೆ. ಅಷ್ಟೇಅಲ್ಲದೆ ಪರೋಕ್ಷವಾಗಿ ಖುರ್‌ಆನ್ ವಾಕ್ಯಗಳಲ್ಲಿ ಬಹಳಕಡೆ ದೇವರ ಚಿಹ್ನೆಯನ್ನು ಕುರಿತು ಹೇಳಲ್ಪಟ್ಟಿದೆ. ಪ್ರತ್ಯಕ್ಷವಾಗಿ 22ನೇ ಸೂರಾದಲ್ಲಿ 32ನೇ ಆಯತ್‌ನಲ್ಲಿ ವಾಕ್ಯದಲ್ಲಿ **"ದೇವರ ಚಿಹ್ನೆಯನ್ನು ಗೌರವಿಸಿರಿ"** ಎಂದು ಪ್ರತ್ಯಕ್ಷವಾಗಿ ಹೇಳಿದ್ದರೂ, ಮುಸ್ಲಿಮ್‌ರಿಗೆ ಇಂದಿನವರೆಗು ದೇವರ ಚಿಹ್ನೆಯನ್ನು ಕುರಿತು ತಿಳಿದಿಲ್ಲವೆಂದೇ ಹೇಳಬಹುದು. ದೇವರ ಚಿಹ್ನೆಯನ್ನು ಕುರಿತು ದೈವ ಗ್ರಂಥವಾದ ಖುರಾಆನ್‌ನಲ್ಲಿ ಹೇಳಿದ್ದರೂ ಅದು ಏನೋ ಪ್ರತ್ಯಕ್ಷವಾಗಿ ಆಗಲಿ ಪರೋಕ್ಷವಾಗಾಗಲಿ ಅರ್ಥವಾಗಲಿಲ್ಲ.

ದೇವರ ಚಿಹ್ನೆಯನ್ನು ಕುರಿತು ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಹೆಚ್ಚಾಗಿ ಹೇಳಿರುವಂತೆ, ದೇವರ ಮುದ್ರೆ ಕುರಿತು ದೈವ ಗ್ರಂಥವಾದ ಇಂಜೀಲು ಗ್ರಂಥದಲ್ಲಿ ಹೆಚ್ಚಾಗಿ ಹೇಳಿದಂತೆ ಇದೆ. ಬೈಬಲ್ (ಇಂಜೀಲು) ಗ್ರಂಥದಲ್ಲಿ ಪರೋಕ್ಷವಾಗಿ ಕೆಲವುಕಡೆ, ಪ್ರತ್ಯಕ್ಷವಾಗಿ ಕೆಲವುಕಡೆ ಹೇಳಿದ್ದಾರೆ. ಅದೇ ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ದೇವರ ಮುದ್ರೆಯನ್ನು ಅಥವಾ ದೇವರ ಚಿಹ್ನೆಯನ್ನು ಕುರಿತು ಪ್ರತ್ಯಕ್ಷವಾಗಿ ಇಲ್ಲ ಆದರೆ ಪರೋಕ್ಷವಾಗಿ ಹೇಳಲ್ಪಟ್ಟಿದೆ. ಮೊದಲು ನಾನು ಭಗವದ್ಗೀತೆಯಲ್ಲಿ ಪರೋಕ್ಷವಾಗಿರುವ ವಿಷಯವನ್ನು ನೋಡಿ 'ದೇವರ ಚಿಹ್ನೆ' ಒಂದರ ಚಿತ್ರಪಟವನ್ನು ಎಲ್ಲರೂ ಕಣ್ಣಿನಿಂದ ನೋಡುವಂತೆ ಅದರ ಆಕಾರವನ್ನು ನಾವು ಬರೆದು ತೋರಿಸುವುದು ನಡೆದಿದೆ. ನಾವು ತೋರಿಸಿದ ದೇವರ ಚಿಹ್ನೆಯ ಗೊಂಬೆಯನ್ನೇ(ಚಿತ್ರವನ್ನೇ) ಖುರ್ ಆನ್ ಗ್ರಂಥದಲ್ಲಿ (22–32) ರಲ್ಲಿ **"ದೇವರ ಚಿಹ್ನೆಯನ್ನು ಗೌರವಿಸಬೇಕು"** ಎಂದು ಬರೆದರೂ ಹೇಗೆ ಗೌರವಿಸಬೇಕೋ ಅವರು ಆಲೋಚಿಸದೆ ಹೋಗಿದ್ದಾರೆ. ದೇವರ ಚಿಹ್ನೆ ನಾಲ್ಕು ಚಕ್ರಗಳ ಆಕಾರವಾಗಿ ಇದೆಯೆಂದು ಕೂಡಾ ಗ್ರಹಿಸಲಾರದೆಹೋಗಿದ್ದಾರೆ. ಅವರು ಅವರ ಹಿರಿಯರು ಹೇಳಿದ

ಪ್ರಕೃತಿ ಜಂತುಗಳನ್ನು, ಪ್ರಕೃತಿ ದೃಶ್ಯಗಳನ್ನು ದೇವರ ಚಿಹ್ನೆಗಳಾಗಿ ಹೋಲಿಸಿ ಕೊಂಡಿದ್ದಾರೆ. ದೇವರು ಹೇಳಿರುವುದು ಪ್ರಕೃತಿ ಸಂಬಂಧವಾದು ದಲ್ಲವೆಂದು ತಿಳಿಯಲಾರದೆ ಹೋಗಿದ್ದಾರೆ.

ಇಂಜೀಲ್ ಗ್ರಂಥದಲ್ಲಿ ಅಂದರೇ ಬೈಬಲ್ ಗ್ರಂಥದಲ್ಲಿನ ನಾಲ್ಕು ಸುವಾರ್ತೆಗಳಲ್ಲಿ ಪರೋಕ್ಷವಾಗಿ ದೇವರ ಮುದ್ರೆಯನ್ನು ಕುರಿತು ಹೇಳುವುದಾಗಿದೆ. ನಾವು ದೇವರ ಚಿಹ್ನೆಯಾಗಿ ಹೇಳಿದ ಗುರುತನ್ನೇ ದೇವರ ಮುದ್ರೆಯಾಗಿ ಈಗ ಬರೆಯಲಾಗಿದೆ. ದೇವರ ಮುದ್ರೆಯನ್ನು ಕುರಿತು ಬೈಬಲ್ ಗ್ರಂಥದಲ್ಲಿನ ಸುವಾರ್ತೆಗಳಲ್ಲಿ ಪರೋಕ್ಷವಾಗಿ ಹೇಳುವುದಲ್ಲದೆ, ಗ್ರಂಥದ ಕೊನೆಯಲ್ಲಿರುವ ಯೋಹಾನ್ ಬರೆದ 'ಪ್ರಕಟಣೆ ಗ್ರಂಥ' ಎನ್ನುವುದರಲ್ಲಿ ಒಂಭತ್ತನೇ ಅಧ್ಯಾಯದಲ್ಲಿ ನಾಲ್ಕನೆ ವಚನದಿಂದ ಆರನೆ ವಚನದವರೆಗು ಪ್ರತ್ಯಕ್ಷವಾಗಿ **'ದೇವರ ಮುದ್ರೆ'** ಎನ್ನುವ ಹೆಸರಿನಿಂದಲೇ ಹೇಳುವುದಾಗಿದೆ. ಆ ವಿಷಯವನ್ನು ಈಗ ನೋಡೋಣ. (ಪ್ರಕಟಣೆ 9-4,5,6) **"ಹಣೆಯ ಭಾಗದಲ್ಲಿ ದೇವರ ಮುದ್ರೆ ಇಲ್ಲದ ಮನುಷ್ಯರಿಗೇ ಹೊರತುಪಡಿಸಿ ಭೂಮಿಮೇಲಿರುವ ಹುಲ್ಲಿಗಾದರೂ, ಯಾವ ಗಿಡಗಳಿಗಾದರೂ ಮತ್ತೆ ಯಾವ ವೃಕ್ಷಕ್ಕಾದರೂ ಹಾನಿ ಉಂಟುಮಾಡಬಾರದೆಂದು ಅವುಗಳಿಗೆ ಆಜ್ಞೆ ಕೊಡಲಾಗಿದೆ. ಮತ್ತು ಅವರನ್ನು ಸಾಯಿಸುವುದಕ್ಕೆ ಅಧಿಕಾರ ಕೊಡಲಿಲ್ಲ ಆದರೆ ಐದು ತಿಂಗಳವರೆಗು ಬಾಧಿಸುವುದಕ್ಕೆ ಅವುಗಳಿಗೆ ಅಧಿಕಾರ ಕೊಡಲಾಗಿದೆ. ಅವುಗಳಿಂದ ಉಂಟಾಗುವ ಬಾಧೆ ಚೇಳು ಮನುಷ್ಯನಿಗೆ ಕಚ್ಚಿದಾಗ ಇರುವಬಾಧೆಯಂತೆ ಇರುತ್ತದೆ. ಆ ದಿನಗಳಲ್ಲಿ ಮನುಷ್ಯರು ಮರಣವನ್ನು ಹುಡುಕುತ್ತಾರೆ ಆದರೆ ಅದು ಅವರಿಗೆ ಸಿಗುವುದೇ ಇಲ್ಲ. ಸಾಯಬೇಕೆಂದು ಆಸೆಪಡುತ್ತಾರೆ ಆದರೆ ಮರಣ ಅವರ ಹತ್ತಿರದಿಂದ ಓಡಿಹೋಗುತ್ತದೆ.."**

ಯೋಹಾನ್ ಪ್ರಕಟಣೆ ಗ್ರಂಥಗಳಲ್ಲಿರುವ ಮೂರು ವಾಕ್ಯಗಳನ್ನು ನೋಡಿದರೆ ದೇವರ ಮುದ್ರೆ ಎಷ್ಟು ಶ್ರೇಷ್ಠವಾದುದೊ, ದೇವರ ಮುದ್ರೆ ಹಣೆಮೇಲೆ ಧರಿಸುವುದರಿಂದ ಎಂತಹ ವಿಪತ್ತು ತೊಲಗಿಹೋಗುತ್ತದೋ, ಆ ವಿಪತ್ತುಗಳಿಂದ ಮನುಷ್ಯರು ಎಷ್ಟು ಬಾಧೆಪಡಬೇಕಾಗಿರುತ್ತದೊ ಎಂದು ಗಮನಿಸಿದರೆ, ದೇವರ

ಮುದ್ರೆಯನ್ನು ಧರಿಸದೆ ಏಕೆ ಇಷ್ಟು ಅಜ್ಞಾನದಲ್ಲಿ ಇದ್ದೇವೆನಿಸುತ್ತದೆ. ಯೋಹಾನ್ ಪ್ರಕಟಣೆ ಗ್ರಂಥದಲ್ಲಿ ಬರೆದಂತೆ ಹಾಗೆ ಪೀಡಿಸುವ ದೇವದೂತರಿದ್ದಾರಾ ಎಂಬ ಅನುಮಾನ ಬರಬಹುದು. ಈ ಮಾತನ್ನು ನಂಬದಂತೆ ಇರುವುದಕ್ಕೆ, ದೇವರ ಮುದ್ರೆಯನ್ನು ಗೌರವಿಸದೆಹೋಗುವುದಕ್ಕೆ ಅವಕಾಶ ಇದೆ. ಆದುದರಿಂದ ಇಲ್ಲಿಯವರೆಗು ಹೇಳಿದ ದೇವರ ಮುದ್ರೆಯನ್ನು, ಒಂದುಸಲ ಪಕ್ಕದ ಪುಟದಲ್ಲಿ ನೋಡಿ ನಂತರ ಅದರಮೇಲಿರುವ ಉದ್ದೇಶವನ್ನು ಹೇಳಿಕೊಳ್ಳೋಣ.

ಈಗ ನಿಮಗೆ ತೋರಿಸಿದ ನಾಲ್ಕು ಚಕ್ರಗಳು ಪ್ರಕಟಣೆ ಗ್ರಂಥದಲ್ಲಿ ಹೇಳಿದ ಅಸಲಾದ ದೇವರಮುದ್ರೆ ಆಗುತ್ತದೆ. ದೇವರ ಮುದ್ರೆಯನ್ನು ಧರಿಸದ ಮನುಷ್ಯರನ್ನು ಅಲ್ಲದೇ ವೃಕ್ಷಗಳು, ಹುಲ್ಲಿನ ಗಿಡಕ್ಕು ಹಾನಿ ಉಂಟುಮಾಡ ಬಾರದೆಂದು ಆಜ್ಞೆ ಕೊಡಲಾಗಿದೆ ಎಂದು ಇದೆ. ಆಜ್ಞೆ ಯಾರು ಕೊಟ್ಟಿದ್ದಾರೆ? ಯಾರಿಗೆ ಕೊಟ್ಟಿದ್ದಾರೆ? ಎನ್ನುವ ವಿಷಯ ಸ್ವಲ್ಪ ಅರ್ಥವಾದರೆ ಮೇಲೆ ಹೇಳಲ್ಪಟ್ಟ ವಾಕ್ಯಗಳ ಮೇಲೆ ನಂಬಿಕೆ ಏರ್ಪಡುತ್ತದೆ. ಆಗ ದೇವರ ಮುದ್ರೆಯನ್ನು




**ಇದು ಸಂಪೂರ್ಣವಾದ ದೇವರ ಮುದ್ರೆ ಮತ್ತು ದೇವರ ಚಿಹ್ನೆ**

ಯಾರಾದರೂ ಗೌರವಿಸುತ್ತಾರೆ ಮತ್ತು ಧರಿಸುತ್ತಾರೆ. ದೇವರ ಮುದ್ರೆ ಜ್ಞಾನರೀತಿಯಲ್ಲಿ ವಿಂಗಡಿಸಿ ಹೇಳಿಕೊಂಡಿದ್ದೇವೆ. ಹಾಗೇ ದೇವರ ಚಿಹ್ನೆಯನ್ನು ಜ್ಞಾನಪದ್ಧತಿಯಲ್ಲಿ ವಿವರಿಸಿ ಹೇಳಿಕೊಂಡಿದ್ದೇವೆ. ಇಲ್ಲಿಯವರೆಗು ನಾವು ಹೇಳಿದ ದೇವರ ಚಿಹ್ನೆ ಅಥವಾ ದೇವರ ಮುದ್ರೆಯನ್ನು ಕುರಿತು ಇತ್ತ ಮುಸ್ಲಿಮ್‌ರಿಗಾಗಲಿ, ಅತ್ತ ಕ್ರೈಸ್ತರಿಗಾಗಲಿ ಗೊತ್ತಿಲ್ಲ. ಹಿಂದೂಗಳ ವಿಷಯಕ್ಕೆ ಬಂದರೆ ಅವರು ಧರಿಸುವ ನಾಮಗಳು, ವಿಭೂತಿ ರೇಖೆಗಳು, ಕುಂಕುಮ ಬೊಟ್ಟು ಈ ಮುದ್ರೆಗೆ ಯಾವುದೇ ಸಂಬಂಧ ಇಲ್ಲದಿರುವವು. ಆದ್ದರಿಂದ ಹಿಂದೂಗಳಿಗೆ ಕೂಡಾ ದೇವರ ಮುದ್ರೆಯನ್ನು ಕುರಿತು ಸ್ವಲ್ಪವಾದರೂ ಗೊತ್ತಿಲ್ಲ. ಇಲ್ಲಿಯವರೆಗು ಈ ಮುದ್ರೆ ಯಾವ ಮತದವರಿಗು ತಿಳಿದಿಲ್ಲ. ದೇವರ ಮುದ್ರೆಯನ್ನು ಕುರಿತು ಮುಖ್ಯವಾಗಿ ಮೂರು ಮತದವರಿಗೆ ತಿಳಿದಿರಬೇಕಾಗಿರುವುದು. ಆದರೆ ಇಂದೂ, ಇಸ್ಲಾಮ್, ಕ್ರೈಸ್ಥರು ಮೂವರು ಈ ಮುದ್ರೆಯನ್ನು ಕುರಿತು ಏನೂ ತಿಳಿಯದವರಾಗಿದ್ದಾರೆ. ಈ ಮುದ್ರೆ ಮೂರು ಮತಗಳಿಗು ಸಂಬಂಧಿಸಿರುವು ದಾಗಿದ್ದರೂ, ದೇವರು ತನ್ನ ಮೂರು ಗ್ರಂಥಗಳಲ್ಲಿ ಈ ಮುದ್ರೆಯನ್ನು ಕುರಿತು ಹೇಳಿದ್ದರೂ, ಮೂರು ಮತದವರು ದೇವರ ಮುದ್ರೆಯನ್ನು ವಿಸ್ಮರಿಸಿದ್ದಾರೆ. ದೇವರು ಹೇಳಿದ ಬೋಧನೆಯನ್ನು ಮನುಷ್ಯರೇ ಅಲ್ಲದೆ ಮನುಷ್ಯರೊಂದಿಗೆ ಹುಟ್ಟಿದ ದೇವರ ಪರಿಪಾಲನೆಯಲ್ಲಿನ ಪಾಲಕರಾಗಿರುವ ಮಹಾ ಭೂತಗಳು, ಭೂತಗಳು, ಗ್ರಹಗಳು,ಉಪಗ್ರಹಗಳು ಮೊದಲಾದವರೆಲ್ಲರೂ ದೇವರ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾರೆ.ದೇವರ ಪಾಲನೆಯಲ್ಲಿನವರೆಲ್ಲರೂ ದೇವರ ಜ್ಞಾನವನ್ನು ಎಷ್ಟೋ ಇಷ್ಟದಿಂದ ತಿಳಿದುಕೊಳ್ಳುವುದಲ್ಲದೆ ತಮಗೆ ಬರುವ ಆಜ್ಞೆಗಳನ್ನು ತಪ್ಪದೆ ನೆರವೇರಿಸುತ್ತಿದ್ದಾರೆ. ಇಲ್ಲಿ ವಾಕ್ಯದಲ್ಲಿ 'ಆಜ್ಞೆ ಕೊಡಲಾಗಿದೆ' ಎಂದು ಹೇಳಿದ್ದಾರೆ ಅಲ್ಲವೆ! ಆಜ್ಞೆಯನ್ನು ದೇವರ ಪಾಲಕರಾದವರಿಗೆ ಕೊಡಲಾಗಿದೆ. ಕೊಟ್ಟವರು ಯಾರು? ಎನ್ನುವುದು ಈಗ ನಮಗೆ ಮುಖ್ಯವಾದ ಪ್ರಶ್ನೆ. ಆಜ್ಞೆ ಕೊಟ್ಟವರನ್ನು ಕುರಿತು ತಿಳಿಯುವುದಕ್ಕೆ ಮೊದಲು ಆಜ್ಞೆಯನ್ನು ಗ್ರಹಿಸಿ ಆಜ್ಞೆಯನ್ನು ಜಾರಿ ಮಾಡುವ ಪಾಲಕರು ಎಷ್ಟುಜನ ಇದ್ದಾರೆ? ಹೇಗಿದ್ದಾರೆ? ಎನ್ನುವ

ವಿಷಯ ಮನುಷ್ಯರಿಗೆ ಸ್ವಲ್ಪ ಅರ್ಥವಾಗಬೇಕಾಗಿದೆ. ಆದ್ದರಿಂದ ಮೊದಲು ಪಾಲಕರ ವಿಷಯ ಸೂಚನೆಪ್ರಾಯವಾಗಿ ತಿಳಿದುಕೊಳ್ಳೋಣ.

ಭೂಮಿಮೇಲೆ ಎರಡು ವಿಧಗಳ ಜೀವರಾಶಿಗಳು ಇವೆ. ಒಂದು ಪಾಲಿಸಲ್ಪಡುವವರು, ಎರಡು ಪಾಲಿಸುವವರು. ಪಾಲಿಸಲ್ಪಡುವವರು ಮನುಷ್ಯರು ಮತ್ತು ಸಮಸ್ತ ಜೀವರಾಶಿಗಳು. ಪಾಲಿಸುವವರು ಭೂತಗಳು, ಗ್ರಹಗಳು ಎನ್ನುವ ಎರಡು ವಿಧದವರು ಇದ್ದಾರೆ. ಪಾಲಿಸಲ್ಪಡುವ ಮನುಷ್ಯರ, ಜೀವರಾಶಿಗಳ ಆಕಾರಗಳು ಹೆಸರುಗಳು ಸ್ವಲ್ಪಮಟ್ಟಿಗೆ ತಿಳಿದೇ ಇವೆ. ಆದರೇ ಪಾಲಿಸುವ ಭೂತಗಳು, ಗ್ರಹಗಳು, ಉಪಗ್ರಹಗಳ ಆಕಾರಗಳು ಯಾವುವು ಮನುಷ್ಯರಿಗೆ ಗೊತ್ತಿಲ್ಲ. ಅವರ ಆಕಾರಗಳನ್ನು ಸಮಗ್ರವಾಗಿ ಅಲ್ಲದೇ ಸೂಚನೆ ಪ್ರಾಯವಾಗಿ ಹೇಳಬೇಕೆಂದುಕೊಂಡಿದ್ದೇವೆ. ಪಾಲಕರ ಸಂಖ್ಯೆ ಭೂತಗಳಾಗಿ, ಗ್ರಹಗಳಾಗಿ, ಉಪಗ್ರಹಗಳಾಗಿ ಮೂರು ವಿಧದವರು ಕೆಲವು ಕೋಟಿಗಳ ಸಂಖ್ಯೆಯಲ್ಲಿ ಇರುತ್ತಾರೆಂದು ಹೇಳಬಹುದು. ಕೋಟಿಗಟ್ಟಲೆ ಇರುವ ಗ್ರಹಗಳಾಗಲಿ, ಭೂತಗಳಾಗಲಿ ಯಾರಿಗೂ ಗೊತ್ತಿಲ್ಲವೆಂದೇ ಹೇಳಬಹುದು. ಅವುಗಳ ಆಕಾರ ಪ್ರಾಣಿಗಳನ್ನು, ಕೀಟಗಳನ್ನು, ಪಕ್ಷಿಗಳನ್ನು, ಮನುಷ್ಯರನ್ನು, ಸರ್ಪಗಳನ್ನು ಸೇರಿಸಿ ಮಾಡಿದಂತಿರುತ್ತದೆ. ಮನುಷ್ಯರು ಪ್ರಾಣಿಗಳು ಬೆರೆತು ಹುಟ್ಟಿದಂತೆ ಕೆಲವು ಇರುವಾಗ, ಪ್ರಾಣಿಗಳು ಪಕ್ಷಿಗಳು ಬೆರೆತು ಹುಟ್ಟಿದಂತೆ ಕೆಲವು ಇರುತ್ತವೆ. ಪಕ್ಷಿಗಳು ಸರ್ಪಗಳು ಬೆರೆತು ಹುಟ್ಟಿದಂತೆ ಕೆಲವು ಇವೆ. ಹೀಗೆ ಮನುಷ್ಯರ ಊಹೆಗೆ ಸಿಗದ ರೂಪಗಳಲ್ಲಿ ಪಾಲಕರಿದ್ದಾರೆಂದು ಹೇಳಬಹುದು. ಕೆಲವರು ಪಾಲಕರು ಎರಡು ಮೂರು ಜಾತಿಗಳು ಸೇರಿ ಹುಟ್ಟಿದ ಆಕಾರಗಳಿರುವಾಗ, ಕೆಲವರು ಪಾಲಕರು ಒಂದೇ ಆಕಾರದಿಂದ ಹುಟ್ಟಿದ್ದಾರೆ. ಯಾವುವು ಯಾವ ಆಕಾರದಲ್ಲಿ ಇದ್ದರೂ ಅವು ಕೆಲವು ನೂರಾರು ಕೋಟಿಗಳಲ್ಲಿ, ಸಾವಿರಾರು ಕೋಟಿಗಳಲ್ಲಿ ಇವೆಯೆಂದು ಹೇಳಬಹುದು. ಭೂಮಿಮೇಲೆ ಪ್ರಸ್ತುತ ಜನಸಂಖ್ಯೆ 700 ಕೋಟಿಜನ ಇರಬಹುದೆಂದುಕೊಳ್ಳೋಣ. 700 ಕೋಟಿ ಜನರಿಗೆ 7000 ಕೋಟಿಗಳು, ಅದಕ್ಕಿಂತ ಹೆಚ್ಚಾಗಿ ಪಾಲಕರಿರಬಹುದೆಂದು ಅಂದಾಜು ಇದೆ.

ಒಬ್ಬ ಮನುಷ್ಯನಿಗೆ ಸುಮಾರು ಹತ್ತುಜನ ಪಾಲಕರಾದರೆ ಉಳಿದ ಜೀವರಾಶಿಗಳೆಲ್ಲವುಗಳಿಗೆ ಸೇರಿಸಿ ಎಷ್ಟುಜನ ಪಾಲಕರಿರುತ್ತಾರೊ ಹೇಳುವುದಕ್ಕೆ ಸಾಧ್ಯವಾಗುವುದಿಲ್ಲ. ಮನುಷ್ಯರನ್ನು ಪಾಲಿಸುವವರವರೆಗು ಅರ್ಥ ಮಾಡಿಕೊಂಡರೂ ಮನುಷ್ಯ ಎಷ್ಟೋ ಜ್ಞಾನವನ್ನು ಸಂಪಾದಿಸಿದಂತಾಗುತ್ತದೆ. ಮನುಷ್ಯರನ್ನು ಪಾಲಿಸುವ ಪಾಲಕರು ದೈವಜ್ಞಾನದಲ್ಲಿ ಮೊದಲ ಜ್ಞಾನಿಗಳಾಗಿದ್ದಾರೆ. ಅವರಿಗೆ ದೇವರೆಂದರೇ ಮಹಾ ಇಷ್ಟ. ದೇವರನ್ನು ದೂಷಿಸುವವರೆಂದರೂ, ದೇವರ ಜ್ಞಾನವನ್ನು ದೂಷಿಸುವವರೆಂದರೂ ಬಹಳ ಕೋಪ. ಆದರೂ ಅವರು ತಮಗೆ ಕೊಟ್ಟಿರುವ ಆಜ್ಞೆಪ್ರಕಾರ ಕೆಲಸ ಮಾಡುತ್ತಾರೆ. ಜ್ಞಾನ ವಿಷಯಗಳಲ್ಲಿ ಅಜ್ಞಾನವಾಗಿ ನಡೆದುಕೊಳ್ಳುವವರಾಗಲಿ, ದೇವರನ್ನು ಗೌರವಿಸದೆ ದೇವತೆಗಳನ್ನು, ಮನುಷ್ಯರನ್ನು ಗೌರವಿಸುವ, ಪೂಜಿಸುವವರ ಮೇಲೆ ಕೂಡಾ ಕೋಪವಾಗಿರುತ್ತಾರೆ. ಆದರೂ ಅವರ ಇಷ್ಟಾನುಸಾರವಾಗಿ ಕೆಲಸ ಮಾಡದೆ ಅವರಿಗೆ ಕೊಡಲಾದ ಆಜ್ಞೆಪ್ರಕಾರ ಕೆಲಸ ಮಾಡುತ್ತಿರುತ್ತಾರೆ. ಮುಖ್ಯವಾಗಿ ಅವರ ಆಕಾರಗಳನ್ನು ಕುರಿತು ಹೇಳಿದರೇ ನಮ್ಮ ಮಾತನ್ನು ನಂಬದವರಿರಬಹುದು. ಹಾಗೆಯೇ ಇರುತ್ತಾರೆಂದು ಹೇಳುವುದಕ್ಕೆ ಆಧಾರವೇನೆಂದು ಕೂಡಾ ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ವಿಧವಾಗಿ ಇದೆ. ನಾನು ಪ್ರತ್ಯಕ್ಷವಾಗಿ ಯಾರನ್ನು ನೋಡಲಿಲ್ಲ ಆದರೆ ಸ್ವಲ್ಪ ನನಗಿರುವ ಜ್ಞಾನದಿಂದ, ದೈವಗ್ರಂಥಗಳಲ್ಲಿ ಹೇಳಿದ ಆಧಾರಗಳಿಂದ ಮಾತ್ರವೇ ಹೇಳಿದ್ದೇನೆ.

ದೇವರ ಪಾಲಕರಲ್ಲಿ ಗ್ರಹಗಳ ಕೆಳಗೆ ಉಪಗ್ರಹಗಳಾಗಿರುವ ಅವರ ಆಕಾರವನ್ನು ಅದೇ ಪ್ರಕಟಣೆ ಗ್ರಂಥದಲ್ಲಿ ಬರೆದ ವಿಧಾನವನ್ನು ನೋಡಿ ಅರ್ಥ ಮಾಡಿಕೊಳ್ಳೋಣ. ಪ್ರಕಟಣೆ 9ನೇ ಅಧ್ಯಾಯ, ಏಳನೆ ವಚನದಿಂದ ಹತ್ತನೆ ವಚನದವರೆಗು ನೋಡೋಣ. **(ಯೋಹಾನ್ ಪ್ರಕಟಣೆ 9-7,8,9,10)** **"ಆ ಮಿಡತೆಗಳ ರೂಪಗಳು ಯುದ್ಧಕ್ಕೆ ಸಿದ್ಧಪಡಿಸಲಾದ ಕುದುರೆಗಳನ್ನು ಹೋಲಿವೆ. ಬಂಗಾರದಂತೆ ಹೊಳೆಯುವ ಕಿರೀಟಗಳಂತಹವು ಅವುಗಳ ತಲೆಗಳ ಮೇಲೆ**

**ಇದ್ದವು. ಅವುಗಳ ಮುಖಗಳು ಮನುಷ್ಯರ ಮುಖಗಳಂತಹವು. ಸ್ತ್ರೀಯರ ತಲೆಕೂದಲಿನಂತಹ ತಲೆ ಕೂದಲು ಅವುಗಳಿಗೆ ಇದ್ದವು. ಅವುಗಳ ಹಲ್ಲುಗಳು ಸಿಂಹದ ಕೋರೆಗಳಂತೆ ಇದ್ದವು. ಕಬ್ಬಿಣದ ಕವಚಗಳಂತಹ ಕವಚಗಳು ಅವುಗಳಿಗೆ ಇದ್ದವು. ಅವುಗಳ ರೆಕ್ಕೆಗಳ ಧ್ವನಿ ಯುದ್ಧಕ್ಕೆ ಓಡಿಹೋಗುವಂತಹ ವಿಸ್ತಾರವಾದ ಕುದುರೆ ರಥಗಳ ಧ್ವನಿಯಂತೆ ಇದ್ದವು. ಚೇಳಿನ ಬಾಲದಂತಹ ಬಾಲಗಳು, ಕೊಂಡಿಗಳು ಅವುಗಳಿಗೆ ಇದ್ದವು. ಐದು ತಿಂಗಳವರೆಗು ಅವುಗಳ ಬಾಲಗಳಿಂದ ಮನುಷ್ಯರಿಗೆ ಹಾನಿ ಮಾಡುವುದಕ್ಕೆ ಅವುಗಳಿಗೆ ಅಧಿಕಾರವಿದೆ.".** ಈ ವಿಧವಾಗಿ ಮನುಷ್ಯರನ್ನು ಬಾಧಿಸುವ ದೂತರ ಆಕಾರಗಳನ್ನು ಕುರಿತು ಸ್ವಲ್ಪ ಇಲ್ಲಿ ಹೇಳಲ್ಪಟ್ಟಿದೆ. ನಾನು ಗತದಲ್ಲಿ ಬಹಳಸಲ ದೇವರ ಪಾಲನೆಯಲ್ಲಿನ ಪಾಲಕರನ್ನು ಕುರಿತು ಹೇಳಿದ್ದೇವೆ. ಅವರಿಗೆ ನೂರಾರೂ ಸಾವಿರಾರೂ ಕೈಗಳು ಕೂಡಾ ಇವೆಯೆಂದು ಹೆಚ್ಚಾಗಿ ಕೈಗಳಿರುವ ಪಾಲಕರನ್ನು ಕುರಿತು ಕೂಡಾ ಹೇಳಿದ್ದೇನೆ. ಅವರ ಆಕಾರಗಳು ಇಲ್ಲಿ ಹೇಳಿದಂತೆ ಮಿಶ್ರಮ ಆಕಾರಗಳಾಗಿ ಇವೆ. ಅವುಗಳ ಬಲವನ್ನು ಅಂದಾಜು ಹಾಕಲಾರೆವು. ದೇವರ ಜ್ಞಾನದಬಗ್ಗೆ ಎಷ್ಟೋ ಇಷ್ಟತೆಯಿಂದಲೂ, ಭಕ್ತಿಯಿಂದಲೂ ಇರುವ ಪಾಲಕರು ಆಗಿರುವುದರಿಂದ ಅವರ ಮುಂದೆ ದೇವರನ್ನಾಗಲಿ, ದೇವರ ಜ್ಞಾನವನ್ನಾಗಲಿ ದೂಷಿಸಿದವರನ್ನು ಶಿಕ್ಷಿಸುವುದಕ್ಕೆ ಆಜ್ಞೆ ಗೋಸ್ಕರ ನೋಡುತ್ತಿರುತ್ತಾರೆ.

ದೇವರ ಪಾಲನೆಯಲ್ಲಿರುವ ಎಷ್ಟೋ ಕೋಟಿಗಳ ಸಂಖ್ಯೆಯಲ್ಲಿರುವ ಪಾಲಕರು ತಮ್ಮ ಇಷ್ಟಬಂದಂತೆ ಪ್ರವರ್ತಿಸದೆ ತಮ್ಮಗೆ ಬರುವ ಆಜ್ಞೆ ಪ್ರಕಾರವೇ ನಡೆದುಕೊಳ್ಳುತ್ತಾರೆಂದು ತಿಳಿಯುತ್ತಿದೆ. **(ಪ್ರಕಟಣೆ 9–5)ರಲ್ಲಿ "ಅವರನ್ನು ಸಾಯಿಸುವುದಕ್ಕೆ ಅಧಿಕಾರ ಕೊಡಲಿಲ್ಲ ಆದರೆ ಐದು ತಿಂಗಳವರೆಗು ಬಾಧಿಸುವುದಕ್ಕೆ ಅವುಗಳಿಗೆ ಅಧಿಕಾರ ಕೊಡಲಾಗಿದೆ".** ಹಾಗೆ ಹತ್ತನೆ ವಾಕ್ಯದಲ್ಲಿ ಕೂಡಾ **"ಮನುಷ್ಯರಿಗೆ ಹಾನಿ ಮಾಡುವುದಕ್ಕೆ ಅವುಗಳಿಗೆ ಅಧಿಕಾರವಿದೆ"** ಎಂದು ಹೇಳಲ್ಪಟ್ಟಿದೆ. ಇದರಪ್ರಕಾರ ಪಾಲಕರೆಲ್ಲರೂ ತಮಗೆ ಕೊಡಲಾದ ಆಜ್ಞೆ ಪ್ರಕಾರ

ಕೆಲಸ ಮಾಡುತ್ತಿರುತ್ತಾರೆಂದು ತಿಳಿಯುತ್ತಿದೆ. ಕೆಲವು ಸಂದರ್ಭಗಳಲ್ಲಿ ಮನುಷ್ಯರು ಮಾಡಿಕೊಂಡ ಪಾಪಗಳನ್ನನುಸರಿಸಿ ಅವರನ್ನು ಸಾಯಿಸುವುದಕ್ಕೆ ಕೂಡಾ ಆಜ್ಞೆ ಕೊಡಲಾಗುತ್ತಿರುತ್ತದೆ. ತಮಗೆ ಬಂದಿರುವ ಆಜ್ಞೆ ಪ್ರಕಾರ ಪಾಲಕರಾಗಿರುವವರು ಕೆಲಸ ಮಾಡುತ್ತಿರುತ್ತಾರೆ. ಪಾಲಕರು ಅನೇಕ ರೂಪಗಳಲ್ಲಿ ಇದ್ದರೂ, ಅನೇಕ ಕೈಗಳಿಂದ ಇದ್ದರೂ ಎಲ್ಲೇ ಆಗಲಿ, ಯಾವ ಸಂದರ್ಭದಲ್ಲೇ ಆಗಲಿ ಮನುಷ್ಯರಿಗೆ ಕಾಣಿಸಿದ ದಾಖಲೆಗಳು ಇಲ್ಲ. ಆದ್ದರಿಂದ ಮನುಷ್ಯರು ಪಾಲಕರಿಂದ ಶಿಕ್ಷೆಗಳು ಅನುಭವಿಸುತ್ತಿದ್ದರೂ ಯಾರಿಂದ ಅವರಿಗೆ ಆ ಬಾಧೆಗಳು ಏರ್ಪಡುತ್ತಿವೆಯೆಂದು ಗೊತ್ತಿಲ್ಲ. ದೊಡ್ಡ ರಸ್ತೆ ಅಪಘಾತಗಳಿಗೆ ಕಾರಕರು ಪಾಲಕರೇ ಆದರೂ ಆ ವಿಷಯ ಮನುಷ್ಯರಿಗೆ ಗೊತ್ತಿಲ್ಲ. ಅನೇಕ ರೋಗಗಳಿಗೆ ಕಾರಕರು ಪಾಲಕರೇ ಯೆಂದು ಬಹಳಜನರಿಗೆ ಗೊತ್ತಿಲ್ಲ. ಚಿಕ್ಕ ಸಂಘಟನೆಗಳು ಮೊದಲುಗೊಂಡು ದೊಡ್ಡ ದೊಡ್ಡ ತುಫಾನುಗಳವರೆಗು, ಸುನಾಮಿಗಳ ವರೆಗು, ಭೂಕಂಪಗಳ ವರೆಗು ಅನೇಕ ಪ್ರಕೃತಿ ವಿಪತ್ತುಗಳಾಗಿ ಬರುವ ಪ್ರಮಾದಗಳು ಕೂಡಾ ಪಾಲಕರಿಂದ ಉಂಟಾಗುತ್ತಿವೆಯೆನ್ನುವ ವಿಷಯ ಬಹಳಜನರಿಗೆ ಗೊತ್ತಿಲ್ಲ. ಇದೆಲ್ಲವೂ ಮನುಷ್ಯರು ಮಾಡಿಕೊಂಡ ಪಾಪಗಳಿಂದಲೇ ನಡೆಯುತ್ತಿವೆ. ಮನುಷ್ಯರ ಪಾಪವನ್ನು ಅನುಸರಿಸಿ ಪಾಲಕರಿಗೆ ಆಜ್ಞೆ ಕೊಡಲಾಗುತ್ತಿದೆ. ಪಾಲಕರಿಗೆ ಬಂದ ಆಜ್ಞೆಪ್ರಕಾರ ದೇವರ ಸೈನಿಕರಾಗಿರುವ ಪಾಲಕರು ಅವರ ಕೆಲಸವನ್ನು ಅವರು ಮಾಡುತ್ತಿರುತ್ತಾರೆ. ಈ ವಿವರವೆಲ್ಲವೂ ತಿಳಿಯುವುದಕ್ಕೆ ದೈವಜ್ಞಾನ ಅಗತ್ಯವೆಂದು ಹೇಳುತ್ತಿರುತ್ತೇವೆ.

ಪಾಲಕರು ಆಕಾಶದಿಂದ ಭೂಮಿವರೆಗು ಇದ್ದಾರೆ. ಅವರು ಎಲ್ಲಿಗಾದರೂ ಹೋಗಬಲ್ಲರು, ಎಲ್ಲಿಯಾದರೂ ಇರಬಲ್ಲರು. ಮನುಷ್ಯರನ್ನು ಪಾಲಿಸುವ ಪಾಲಕರು ಹೊರಗಡೆ ಪ್ರಪಂಚದಲ್ಲಿ ಕೆಲವು ನೂರಾರೂ ಕೋಟಿಗಳಲ್ಲಿ ಇದ್ದರೂ ಮನುಷ್ಯರಿಗೆ ಅವರ ವಿಷಯ ಗೊತ್ತಿಲ್ಲ. ಪ್ರಕೃತಿಯೆಲ್ಲಾ ತಿರುಗುತ್ತಾ ಮನುಷ್ಯರು ಕರ್ಮವನ್ನನುಸರಿಸಿ ಪ್ರವರ್ತಿಸುವುದಕ್ಕೆ ಪ್ರಕೃತಿಯಿಂದಲೇ ಆಜ್ಞೆಗಳು

ಕೊಡಲಾಗುತ್ತಿವೆ. ಪ್ರಕೃತಿಯಿಂದ ಬರುವ ಆಜ್ಞೆಯನ್ನು ಪಾಲಕರಾಗಿರುವ ಗ್ರಹಗಳು, ಭೂತಗಳು ನೆರವೇರಿಸುತ್ತಿವೆ. ಪ್ರಕೃತಿ ಹಿಂದಿದ್ದು ಪ್ರಕೃತಿಯನ್ನು ನಡೆಸುವವನು ಪರಮಾತ್ಮ. ಪರಮಾತ್ಮ ಪ್ರಕೃತಿಗೆ ಹೇಗೆ ತನ್ನ ಸೂಚನೆಗಳನ್ನು ತಿಳಿಸುತ್ತಾನೊ ನಮಗೆ ತಿಳಿದಿಲ್ಲ. ಪ್ರಕೃತಿ ದೇವರ ಸೂಚನೆ ಪ್ರಕಾರ ಪಾಲಕರಿಗೆ ಆಜ್ಞೆ ಕೊಟ್ಟಾಗ, ಪಾಲಕರು ಹಾಗೇ ಕೆಲಸ ಮಾಡುತ್ತಿದ್ದಾರೆ. ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗು ಎರಡು ವಿಧಗಳಲ್ಲಿ ಪಾಲಿಸಲ್ಪಡುತ್ತಿದ್ದಾನೆ. ಒಂದು ಹೊರಗಿನ ಪಾಲನೆ ಮೂಲಕ, ಎರಡು ಒಳಗಿನ ಪಾಲನೆ ಮೂಲಕವೆಂದು ಹೇಳಬಹುದು. ಒಳಗೆ, ಹೊರಗೆ ಎನ್ನುವುದರಲ್ಲಿ ಶರೀರದ ಹೊರಗೆ, ಶರೀರದೊಳಗೆಯೆಂದು ಹೇಳಬಹುದು. ಶರೀರದ ಹೊರಗೆ ಪ್ರಕೃತಿಯಿಂದ ಆಜ್ಞೆಗಳು ಬಂದರೇ, ಆ ಆಜ್ಞೆಗಳ ಮೇರೆಗೆ ಪಾಲಕರು ಕೆಲಸ ಮಾಡಿದಾಗ, ಶರೀರದೊಳಗೆ ಸ್ವತಃವಾಗಿ ಆತ್ಮವೇ ಮನುಷ್ಯನನ್ನು ಕಷ್ಟಸುಖಗಳು ಅನುಭವಿಸುವಂತೆ ಮಾಡುತ್ತಿದೆ. ಹೊರಗೆ ಪ್ರಕೃತಿ ಹೊರತು ಪರಮಾತ್ಮ ಕೆಲಸ ಮಾಡುವುದಿಲ್ಲ. ಪ್ರಕೃತಿಯಿಂದ ಬರುವ ಆಜ್ಞೆಗಳು ಸ್ವತಃವಾಗಿ ಪ್ರಕೃತಿ ಕೊಡುವಂತೇ ಇರುತ್ತವೆ. ಆದರೂ ಗೌರವಪ್ರದವಾಗಿ ಪ್ರಕೃತಿಗೆ ಪರಮಾತ್ಮ ಸೂಚನೆಗಳ ಮೂಲಕ ಪ್ರಕೃತಿ ಆಜ್ಞೆಗಳನ್ನು ಕೊಡುತ್ತಿದೆ ಯೆಂದು ಹೇಳುತ್ತಿದ್ದೇವೆ. ಆದರೂ ಪ್ರಕೃತಿಗೆ ಪರಮಾತ್ಮ ಸೂಚನೆ ಮಾಡುತ್ತಿದ್ದಾನೆಂದು ಹೇಳುವುದಕ್ಕೆ ಶಾಸ್ತ್ರಾಧಾರ ಏನೂ ಇಲ್ಲ.

ಶರೀರದಲ್ಲಿ ಆತ್ಮ ದೇವರಾಗಿದ್ದೂ ಮತ್ತು ಕಾರ್ಯಕರ್ತನಾಗಿದ್ದೂ ಎರಡು ವಿಧಗಳ ಕೆಲಸ ಮಾಡುತ್ತಾ ಜೀವಿಗಳನ್ನು ಪಾಲಿಸುತ್ತಿದ್ದಾನೆ. ಆತ್ಮ ಶರೀರದಲ್ಲಿ ಒಂದುಕಡೆ ದೇವರಾಗಿದ್ದರೂ ಮತ್ತೊಂದುಕಡೆ ಕಾರ್ಯಕರ್ತನಾಗಿ ಎಂದರೇ ಗುಮಾಸ್ತನಂತೆ ಕೆಲಸ ಮಾಡುವವನಾಗಿದ್ದು, ಕೆಲಸ ಮಾಡುತ್ತಾ ಜೀವರಾಶಿಗಳನ್ನು (ಮನುಷ್ಯನನ್ನು) ಕಷ್ಟಸುಖಗಳನ್ನು ಅನುಭವಿಸುವಂತೆ ಮಾಡುತ್ತಿದ್ದಾನೆ. ಶರೀರದಲ್ಲಿರುವ ಜೀವಿಯು ಮಾಡಿಕೊಂಡ ಪ್ರಾರಬ್ಧ ಕರ್ಮಪ್ರಕಾರ ಕಷ್ಟಸುಖಗಳನ್ನು ಅನುಭವಿಸುವಂತೆ ಮಾಡುವುದಕ್ಕೆ ಶರೀರದಲ್ಲಿನ

ಆತ್ಮವೇ ಸ್ವತಃವಾಗಿ ಕೆಲಸವನ್ನು ಮಾಡುತ್ತಾ ಕಷ್ಟಸುಖ ಅನುಭವಗಳನ್ನು ಹೊಂದುವಂತೆ ಮಾಡುತ್ತಿದ್ದಾನೆ. ಕರ್ಮಪ್ರಕಾರವೇ ನಡೆಯುವ ಆತ್ಮ ಕರ್ಮ ಪ್ರಕಾರವೇ ಜೀವಿಯನ್ನು ನಡೆಸುತ್ತಿದೆ. ಹಾಗೇ ಕರ್ಮ ಪ್ರಕಾರವೇ ಜೀವಿಯನ್ನು ಸಾಯಿಸುತ್ತಿದೆ. ಹಾಗೇ ಜೀವಿಯನ್ನು ಮತ್ತೊಂದು ಶರೀರದಲ್ಲಿ ಹುಟ್ಟಿಸುತ್ತಿದೆ. ಕಷ್ಟಸುಖಗಳನ್ನು, ಸಾವು ಹುಟ್ಟುಗಳನ್ನು ಉಂಟುಮಾಡುವ ಆತ್ಮ ಜೀವಿಯ ಶ್ರದ್ಧೆಯನ್ನನುಸರಿಸಿ ಜ್ಞಾನವನ್ನು ಉಂಟುಮಾಡುತ್ತಿದೆ. ಮನುಷ್ಯನ ಇಷ್ಟವನ್ನನುಸರಿಸಿ ಜ್ಞಾನವನ್ನು ಉಂಟುಮಾಡಿದಂತೆ, ಅಯಿಷ್ಟವನ್ನನುಸರಿಸಿ ಅಜ್ಞಾನವನ್ನು ಕೂಡಾ ಉಂಟುಮಾಡುತ್ತಿದೆ. ಶರೀರದೊಳಗೆ ಆತ್ಮ ಪಾಲಿಸಿದಾಗ, ಶರೀರ ಹೊರಗೆ ಪಾಲಕರು ಪಾಲಿಸುತ್ತಾ ಜೀವಿಯನ್ನು ನಡೆಸುತ್ತಿದ್ದಾರೆ. ಶರೀರದ ಹೊರಗೆ ಪಾಲಕರು ಕೊಡುವ ತೊಂದರೆಗಳನ್ನು, ಕಷ್ಟ ಸುಖಗಳನ್ನು ಸಹಿಸಿಕೊಳ್ಳದೆ ಮನುಷ್ಯನಾದವನು ಸಾವನ್ನು ಹುಡುಕಿಕೊಳ್ಳುತ್ತಾನೆ ಎಂದು ಇದೆ. ಕರ್ಮ ಪ್ರಕಾರವೇ ಎಲ್ಲಾ ನಡೆಯುತ್ತವೆ ಆದ್ದರಿಂದ ಅವನು ಅನುಭವಿಸಬೇಕಾಗಿರುವುದು ಅನುಭವಿಸದೆ ತಪ್ಪಲ್ಲ. ಆದ್ದರಿಂದ ಬಾಧೆಗಳಿಗೆ ಸಹಿಸಿಕೊಳ್ಳಲಾರದೆ ಮರಣಕ್ಕಾಗಿ ಹುಡಿಕಿದರೂ ಮರಣ ಬರುವುದಿಲ್ಲ. ಶರೀರದಲ್ಲಿ ಆತ್ಮವೇ ಎಲ್ಲಾ ಮಾಡುತ್ತಿದೆ. ಆದ್ದರಿಂದ ಆತ್ಮಗೆ ತಿಳಿಯದೇ ಸಾವು ಬರುವುದಿಲ್ಲ. ಶರೀರದಲ್ಲಿ ಪರಿಪಾಲನೆ ಕ್ಷಣಕ್ಷಣ ನಡೆಯುತ್ತಿರುವಾಗ, ಶರೀರ ಹೊರಗೆ ಪಾಲನೆ ಆಗಾಗ ನಡೆಯುತ್ತಿರುತ್ತದೆ. ಹೊರಗಿನ ಅನುಭವಕ್ಕಾದರೂ, ಒಳಗಿನ ಅನುಭವಕ್ಕಾದರೂ ಕರ್ಮವೇ ಕಾರಣವಾಗಿರುವುದರಿಂದ ಎಲ್ಲಾ ಕರ್ಮದಿಂದಲೇ ಕರ್ಮಪ್ರಕಾರವೇ ನಡೆಯುತ್ತಿವೆ. ಆದರೇ ಮನುಷ್ಯ ಒಳಗಿನ ಆತ್ಮ ಪಾಲನೆಯನ್ನು ತಿಳಿದರೆ, ನಂತರ ಸ್ವಲ್ಪಸ್ವಲ್ಪವಾಗಿ ಹೊರಗಿನ ಪಾಲನೆ ಅರ್ಥವಾಗುತ್ತದೆ.

ಶರೀರದಲ್ಲಿ ಆತ್ಮವೇ ದೇವರು, ಆತ್ಮವೇ ಪಾಲಕನು, ಆತ್ಮವೇ ಕಾರ್ಯಕರ್ತನಾಗಿ ಇದ್ದಾನೆ. ಹೊರಗೆ ದೇವರು ಪರಮಾತ್ಮ ಇದ್ದರೂ ಆತನು ಇಲ್ಲದಂತೇ ಇದ್ದಾನೆ. ಪರಮಾತ್ಮ ಏನು ಮಾಡದಿದ್ದರೂ ಹೊರಗಡೆಯೇ

ಇರುವ ಪ್ರಕೃತಿಯೇ ಹೊರಗಡೆಯೇ ಇರುವ ಪಾಲಕರಿಂದ ಮನುಷ್ಯನನ್ನು ಪಾಲಿಸುತ್ತಿದೆ. ದೇವರಾದ ಪರಮಾತ್ಮ ಪ್ರಕೃತಿ ಹಿಂದಿದ್ದು ಯಾರಿಗೂ ತಿಳಿಯದಂತೆ ಇದ್ದಾನೆ. ಮೂಲಕರ್ತ, ಆದಿ ದೇವರು ಪರಮಾತ್ಮನೇ ಆದರೂ ಮನುಷ್ಯರೆಲ್ಲರಿಗೂ ಶರೀರದಲ್ಲಿರುವ ಆತ್ಮವನ್ನೇ ದೇವರನ್ನಾಗಿ ಪ್ರಕಟಿಸಿ, ತನಗಿರುವ ಅಧಿಕಾರಗಳೆಲ್ಲ ಆತ್ಮಗೆ ಕೊಟ್ಟು, ಪ್ರಜೆಗಳಿಗೆ ಆರಾಧ್ಯದೈವವಾಗಿ ಇರುವಂತೆ ಸ್ವತಃವಾಗಿ ದೇವರೇ ನಿರ್ಣಯಿಸಿದ್ದಾನೆಂದು ಖುರ್‌ಆನ್ ಗ್ರಂಥದಲ್ಲಿ (3–18)ರಲ್ಲಿ ಹೇಳುವುದಾಗಿದೆ. ಒಂದು ಖುರ್‌ಆನ್ ಗ್ರಂಥದಲ್ಲಿಯೇ ಅಲ್ಲದೆ ಉಳಿದ ಭಗವದ್ಗೀತೆಯಲ್ಲಿಯೂ, ಬೈಬಲ್‌ನಲ್ಲಿಯೂ ಆತ್ಮವನ್ನೇ ಆರಾಧ್ಯದೇವರಾಗಿ ಹೇಳಿದ್ದಾರೆ. ಆತ್ಮ ದೇವರೇ ಅಲ್ಲದೆ, ಶರೀರದಲ್ಲಿ ಕಾರ್ಯಕರ್ತನಾಗಿ ಕೂಡಾ ಇದೆಯೆಂದು ಅದೇ ಖುರ್‌ಆನ್ ಗ್ರಂಥದಲ್ಲಿ (6–102) ನೇ ವಾಕ್ಯದಲ್ಲಿ ಹೇಳಿದ್ದಾರೆ. ಆತ್ಮ ಮನುಷ್ಯ ಮಾಡಿಕೊಂಡ ಕರ್ಮಪ್ರಕಾರ ಕೆಲಸಮಾಡುತ್ತಾ ಪಾಪಪುಣ್ಯಗಳನ್ನು ಅನುಸರಿಸಿ ಕಷ್ಟಸುಖಗಳನ್ನು ಉಂಟುಮಾಡುತ್ತಿರುತ್ತದೆ. ಆತ್ಮ ಶರೀರದಲ್ಲಿ ಉಂಟುಮಾಡಿದ ಪ್ರತಿ ಪಾಪವನ್ನಾಗಲಿ ಪುಣ್ಯವನ್ನಾಗಲಿ ಜೀವಿಯು ಅನುಭವಿಸುತ್ತಿದ್ದಾನೆ. ಆದರೇ ಹೊರಗಿನ ಪ್ರಪಂಚದಲ್ಲಿ ಪ್ರಕೃತಿ ತನ್ನ ಪಾಲಕರಿಂದ ಮನುಷ್ಯನನ್ನು ಕೆಲವು ಪ್ರಮಾದಗಳಿಗೆ ಗುರಿ ಮಾಡುವಂತೆ ತಿಳಿದುಕೊಂಡಿದ್ದೇವೆ. ಅದು ಕೂಡಾ ಮನುಷ್ಯ ಮಾಡಿಕೊಂಡ ಪಾಪದಿಂದ ನಡೆಯುವುದೇ ಅಲ್ಲವೆ! ಶರೀರದಲ್ಲಿರುವ ಆತ್ಮ ಪಾಪಪುಣ್ಯಗಳನ್ನು ತನ್ನ ಶರೀರದಲ್ಲಿಯೇ ಪಾಲಿಸಿದಾಗ, ಹೊರಗೆ ಅನುಭವಿಸಬೇಕಾದ ಪಾಪಪುಣ್ಯಗಳನ್ನು ಹೊರಗಿನ ದೇವರಾದ ಪರಮಾತ್ಮ ಪ್ರಕೃತಿಗೆ ಸೂಚನೆಗಳನ್ನು ಕೊಟ್ಟಾಗ, ಪ್ರಕೃತಿ ಪಾಲಕರಿಗೆ ಸೂಚನೆಗಳು ಕೊಟ್ಟಾಗ, ಪಾಲಕರು ಮನುಷ್ಯನನ್ನು ಕಷ್ಟಸುಖಗಳಿಗೆ ಗುರಿ ಮಾಡುತ್ತಿದ್ದಾರೆ.

ಮನುಷ್ಯ ಶರೀರದ ಹೊರಗೆ ಅನುಭವಿಸಿದರೂ, ಶರೀರದೊಳಗೆ ಅನುಭವಿಸಿದರೂ ಮನುಷ್ಯನ ತಲೆಯಲ್ಲಿ ಕರ್ಮಚಕ್ರದಲ್ಲಿರುವ ಕರ್ಮಪ್ರಕಾರವೇ ಅನುಭವ ಇರುತ್ತದೆ. ಹೊರಗೆ ಅನುಭವಿಸಬೇಕೆಂದು ಮೊದಲೇ ನಿರ್ಣಯಿಸಲ್ಪಟ್ಟಿರುವ ಕರ್ಮಗಳನ್ನು ಪ್ರಕೃತಿ ಹೊರಗೆ ಅನುಭವಿಸುವಂತೆ ಮಾಡುತ್ತದೆ.

ಶರೀರದೊಳಗೆ ಅನುಭವಿಸಬೇಕಾದ ಕರ್ಮಗಳನ್ನು ಆತ್ಮ ಶರೀರದೊಳಗೆ ಅನುಭವಿಸುವಂತೆ ಮಾಡುತ್ತದೆ. ಶರೀರದ ಹೊರಗೆ ಪಾಲಕರಾದ ಭೂತಗಳು, ಗ್ರಹಗಳು ತಮಗೆ ಬಂದಿರುವ ಆಜ್ಞೆಪ್ರಕಾರ ಕರ್ಮವನ್ನು ಅನುಭವಿಸುವಂತೆ ಮಾಡುವುದಲ್ಲದೆ, ಕರ್ಮವನ್ನು ಅನುಭವಿಸುವಂತೆ ಮಾಡದೆ ಕರ್ಮವನ್ನು ಇಲ್ಲಂದಂತೆ ಮಾಡುವಂತಹ ಸಾಮರ್ಥ್ಯ ಇರುವವಾಗಿವೆ. ದೇವರ ಮೇಲೆ ವಿಶ್ವಾಸವಿರುವವನ ಕರ್ಮಗಳನ್ನು ಆತ್ಮ ಶರೀರದಲ್ಲಿ ಕ್ಷಮಿಸುತ್ತದೆ ಎಂದು ತಿಳಿದುಕೊಂಡಿದ್ದೇವೆ. ಭಗವದ್ಗೀತೆಯಲ್ಲಿ ಹೇಳಿದ ಪ್ರಕಾರ ಜ್ಞಾನವಿರುವ ಮನುಷ್ಯನಿಗೆ ಜ್ಞಾನಶಕ್ತಿ ಇರುತ್ತದೆಂದು, ಜ್ಞಾನಶಕ್ತಿಯೇ ಜ್ಞಾನಾಗ್ನಿಯಾಗಿ ಬದಲಾಗಿ ಮನುಷ್ಯನಲ್ಲಿನ ಕರ್ಮವನ್ನು ದಹಿಸುತ್ತಿದೆಯೆಂದು ಹೇಳಿದ್ದಾರೆ. ಭಗವದ್ಗೀತೆಯಲ್ಲಿ ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ 37ನೇ ಶ್ಲೋಕದಲ್ಲಿ ಈ ವಿಷಯವನ್ನು ಹೇಳಿದ್ದಾರೆ ನೋಡಿರಿ.

**ಶ್ಲೋ॥ 37. ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರುತೇರ್ಜುನ।**
**ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ॥**

**ಭಾವಾರ್ಥ :– "ಅಗ್ನಿಯಲ್ಲಿ ಎಷ್ಟು ಕಟ್ಟಿಗೆಗಳಾದರೂ ಸುಟ್ಟು ಬೂದಿಯಾದಂತೆ ಜ್ಞಾನವೆಂಬ ಅಗ್ನಿಯಲ್ಲಿ ಸರ್ವ ಕರ್ಮಗಳು ಸುಟ್ಟು ಹೋಗುತ್ತವೆ. ಇದರಲ್ಲಿ ಯಾವುದೇ ಅನುಮಾನವಿಲ್ಲ."** ಎಂದು ಹೇಳಿದ್ದಾರೆ. ಆ ಮಾತಿನ ಪ್ರಕಾರ ಶರೀರದೊಳಗೆ ಅನುಭವಕ್ಕೆ ಬರುವ ಕರ್ಮಗಳು ಶರೀರದೊಳಗೇ ಜ್ಞಾನದಿಂದ ಕ್ಷಮಿಸಲ್ಪಡುತ್ತವೆ. ಅದನ್ನೇ ಸುಟ್ಟುಹೋಗುವುದು ಎಂದು ಅರ್ಥವಾಗುವಂತೆ ಹೇಳಿದ್ದಾರೆ. ಶರೀರದೊಳಗಿರುವ ಆತ್ಮವೇ ಶರೀರದೊಳಗಿನ ಕೆಲವು ಕರ್ಮಗಳನ್ನು ಕ್ಷಮಿಸುತ್ತಿದ್ದಾನೆ. ಅಂದರೆ ಇಲ್ಲದಂತೆ ಮಾಡುತ್ತಿದ್ದಾನೆ. ಯಾವ ಮನುಷ್ಯನಾದರೂ ದೇವರ ಸತ್ಯವಾದ ಜ್ಞಾನವನ್ನು ತಿಳಿದು ಆಚರಿಸಿದರೆ, ಸ್ವಚ್ಛವಾದ ದೇವರ ಜ್ಞಾನವನ್ನು ತಿಳಿದು ಅದೇ ಭಾವನೆಯನ್ನು ಹೊಂದಿರುವುದರಿಂದ ಆತನ ಕರ್ಮಗಳು ಇಲ್ಲದಂತೆ ಹೋಗುತ್ತವೆ, ಅಂದರೆ ಕ್ಷಮಿಸಲ್ಪಡುತ್ತವೆ. ದೈವಜ್ಞಾನವಿರುವ

ಮನುಷ್ಯ ಒಳಗೆ ಅನುಭವಿಸಬೇಕಾದ ಕರ್ಮಗಳನ್ನು ಅನುಭವಿಸದಂತೆ ಶರೀರದೊಳಗೆ ಆತ್ಮನಾದ ದೇವರು ಮಾಡುತ್ತಿದ್ದಾನೆ. ಶರೀರದ ಹೊರಗೆ ಕರ್ಮಗಳನ್ನು ಅನುಭವಿಸದಂತೆ ಪರಮಾತ್ಮನಾದ ದೇವರೇ ಮಾಡುತ್ತಿದ್ದಾನೆ. ಆದರೇ ಆತನು ಕೆಲಸ ಮಾಡದವನಾದ್ದರಿಂದ ತಾನು ಸ್ವತಃವಾಗಿ ಏನೂ ಮಾಡದೇ ತನ್ನ ಪಾಲಕರಿಂದ ಮಾಡಿಸುತ್ತಾನೆ. ಆದ್ದರಿಂದ ದೇವರು ಕ್ಷಮಾಶೀಲನು, ಕರುಣಾಮಯನು ಎಂದು ದೈವಗ್ರಂಥಗಳಲ್ಲಿ ಹೇಳಿದ್ದಾರೆ. ದೇವರನ್ನು ವಿಶ್ವಾಸಿಸಿದವನಿಗೆ, ದೇವರ ಜ್ಞಾನವನ್ನು ತಿಳಿದವನಿಗೆ ದೇವರು ಕ್ಷಮಾಶೀಲನು, ಕರುಣಾಮಯನು. ಅಷ್ಟೇ ಹೊರತು ಎಲ್ಲರಿಗೂ ದೇವರು ಕ್ಷಮಾಶೀಲನು ಅಲ್ಲ. ಪಾಪವನ್ನು ಕ್ಷಮಿಸುವುದರಲ್ಲೇ ಆತನಿಗೆ ಕರುಣೆ ಇದೆ ಕರುಣಾಮಯನು ಆದರೆ, ಅಜ್ಞಾನಿಗಳ ಬಗ್ಗೆ ಕರುಣಾಮಯನು ಅಲ್ಲವೆಂದು ತಿಳಿಯಬೇಕು.

ದೈವಗ್ರಂಥಗಳ ಪ್ರಕಾರ ಜ್ಞಾನವನ್ನು ತಿಳಿದು ಅದೇ ಭಾವನೆಯಲ್ಲಿ ಇರುವವನಿಗೆ ಅವನ ಶರೀರದಲ್ಲಿನ ಆತ್ಮವೇ ಅವನ ಕರ್ಮಗಳನ್ನು ಸುಟ್ಟುಹಾಕುತ್ತಿದೆ. ಶರೀರದ ಹೊರಗೆ ಅನುಭವಿಸಬೇಕಾದ ಕರ್ಮಗಳನ್ನು ಶರೀರದ ಹೊರಗಿರುವ ಪಾಲಕರೇ ಅನುಭವಿಸುವಂತೆ ಮಾಡುವುದಕ್ಕಾಗಲಿ, ಅನುಭವಿಸದೇ ಕರ್ಮವನ್ನು ಇಲ್ಲದಂತೆ ಮಾಡುವುದಕ್ಕಾಗಲಿ ಅರ್ಹರಾಗಿದ್ದಾರೆ. ಶರೀರದೊಳಗೆ ಆತ್ಮ ಮಾಡುವ ಕೆಲಸವನ್ನು, ಶರೀರದ ಹೊರಗೆ ಪ್ರಕೃತಿಯಲ್ಲಿನ ಪಾಲಕರು ಶಿಕ್ಷಿಸುವುದಾಗಲೀ, ಕ್ಷಮಿಸುವುದಾಗಲೀ ಮಾಡುತ್ತಿದ್ದಾರೆ. ಇದೆಲ್ಲವೂ ಕಣ್ಣಿಗೆ ಕಾಣಿಸುವ ವಿಷಯವಲ್ಲ. ಜ್ಞಾನಕ್ಕೆ ಮಾತ್ರವೇ ತಿಳಿಯುವ ವಿಷಯ. ಆದ್ದರಿಂದ ಜ್ಞಾನ ಇರುವವರೇ ಈ ವಿಷಯಗಳನ್ನು ಸುಲಭವಾಗಿ ಗ್ರಹಿಸಬಲ್ಲರು. ಜ್ಞಾನವಿಲ್ಲದವರು, ದೇವರ ಮೇಲೆ ವಿಶ್ವಾಸ ಇಲ್ಲದವರು ನಾವು ಹೇಳಿದ ವಿಷಯಗಳನ್ನು ನಂಬಲಾರರು. ನಿವು ಹೇಳುವುದಕ್ಕೆ ಆಧಾರವಿದೆಯಾ, ಶಾಸ್ತ್ರಾಧಾರವಿದೆಯಾ? ಎಂದು ಪ್ರಶ್ನಿಸುತ್ತಾರೆ. ಭಗವದ್ಗೀತೆಯಲ್ಲಿ ಜ್ಞಾನಯೋಗ

ದಲ್ಲಿ ಹೇಳಿದ 37ನೇ ಶ್ಲೋಕವೊಂದರ ಆಧಾರದಿಂದ ನಾವು ಈ ಮಾತು ಹೇಳುತ್ತಿದ್ದೇವೆಂದರೂ, ಅದೇ ನಮಗೆ ಶಾಸ್ತ್ರಾಧಾರ ಎಂದು ಹೇಳಿದರೂ ಪ್ರತ್ಯಕ್ಷವಾಗಿ ನಾವು ನೋಡುವವರೆಗು ನಂಬುವುದಿಲ್ಲ ಎನ್ನುವವರಿದ್ದಾರೆ.

ಅಂತಹವರಿಗೆ ಶರೀರದೊಳಗೆ ನಡೆಯುವ ಕರ್ಮ ಕ್ಷಮಾಪಣೆ ಏನೂ ತಿಳಿದಿಲ್ಲ. ಆದ್ದರಿಂದ ಹೊರಗೆ ನಡೆಯುವ ಕರ್ಮ ಕ್ಷಮಾಪಣೆ ವಿಷಯದಲ್ಲೇ ಪ್ರತ್ಯಕ್ಷವಾಗಿ ಕಾಣಿಸುವಂತೆ ಮಾಡಬೇಕೆಂದು ನಮಗೆ ತಾತನಾದ ಪರಮಾತ್ಮ ಅಂದುಕೊಳ್ಳುವುದರಿಂದ ಅಜ್ಞಾನಿಗಳು ಸಹಿತ ವಿಶ್ವಾಸಿಸುವಹಾಗೆ, ಅವರು ಸಹ ಜ್ಞಾನಿಗಳಾಗಿ ಬದಲಾಗುವಂತೆ, ಹೇತುವಾದಿಗಳನ್ನು, ನಾಸ್ತಿಕವಾದಿಗಳನ್ನು ಆಲೋಚಿಸುವಂತೆ ಮಾಡುವಹಾಗೆ, ಪಾಲಕರಿಂದ ಪಾಪಕ್ಷಮಾಪಣೆ ನಡೆಯುತ್ತಿರುವುದು ಈ ದಿನ ಪ್ರತ್ಯಕ್ಷವಾಗಿ ಕಾಣಿಸುವಂತೆ ದೇವರು ಮಾಡಿದ್ದಾನೆಂದು ಹೇಳಬಹುದು. ಹೊರಗಿನ ದೇವರು ಏನೂ ಮಾಡದೇ ಸ್ಥಬ್ದತೆಯಾಗಿರುತ್ತಾ ಎಲ್ಲಾ ತನ್ನ ಕಾರ್ಯಕರ್ತರಾದ ಪ್ರಕೃತಿಯಲ್ಲಿ ಪಾಲಕರಾಗಿ ಇರುವವರಿಂದ ಮಾಡಿಸುತ್ತಿದ್ದಾನೆ. ಹೊರಗೆ ಪಾಲಕರು ಎಷ್ಟೋ ಕೋಟಿ ಜನ ಇದ್ದು, ದೊಡ್ಡ ಅಪಘಾತಗಳನ್ನು ಒಬ್ಬರಿಗೆ ಇಬ್ಬರಿಗೆ ಅಲ್ಲದೆ ಸಾಮೂಹಿಕವಾಗಿ ಮನುಷ್ಯರಿರುವ ಕಡೆ ಉಂಟುಮಾಡಿ, ನೂರು ಅಥವಾ ಸಾವಿರ ಸಂಖ್ಯೆಯಲ್ಲಿ ಜನರು ಮರಣಿಸುವಂತೆ ಮಾಡುತ್ತಿದ್ದಾರೆಂದು ಹೇಳಿಕೊಂಡಿದ್ದೇವೆ. ಅವರಿಗೆ ಕರ್ಮವನ್ನು ಪಾಲಿಸುವುದೇ ಅಲ್ಲದೆ ಕರ್ಮವನ್ನು ಸುಟ್ಟುಹಾಕುವುದೂ ಸಹ ಮಾಡುತ್ತಿದ್ದಾರೆ. ದೇವರ ಮೇಲೆ, ದೇವರ ಜ್ಞಾನದ ಮೇಲೆ ವಿಶ್ವಾಸವಿರುವವರಿಗೆ ಹೊರಗೆ ಪಾಲಕರು ಕರ್ಮವನ್ನು ಹೇಗೆ ಸುಟ್ಟುಹಾಕಿದ್ದಾರೋ (ಇಲ್ಲದಂತೆ ಮಾಡಿದ್ದಾರೋ) ಒಂದು ಪ್ರತ್ಯಕ್ಷ ಸಂಘಟನೆಯಿಂದ ತಿಳಿದುಕೊಳ್ಳೋಣ. ಶರೀರದೊಳಗೆ ಆತ್ಮ ದೇವರು ಕರ್ಮವನ್ನು ಇಲ್ಲದಂತೆ ಮಾಡಿದರೂ ಅದು ಯಾರಿಗೂ ಅರ್ಥವಾಗುವುದಿಲ್ಲ. ಅದು ಹೀಗೆ ನಡೆದಿದೆಯೆಂದು ತಿಳಿದಿಲ್ಲ. ತಗಲುವ ಪೆಟ್ಟು ತಗಲದಂತೆ ಹೋದರೂ, ಬಂದಿರುವ ರೋಗ ತಿಂಗಳ ಕಾಲ ಪೀಡಿಸುವುದು ಒಂದು ದಿನದಲ್ಲೇ ಇಲ್ಲದಂತೆ ಹೋದರೂ ಅದೆಲ್ಲಾ

ಸಹಜವಾಗಿಯೇ ನಡೆದಿದೆ ಎಂದುಕೊಳ್ಳುತ್ತಾರೆ. ಒಬ್ಬನಿಗೆ ಶರೀರದಲ್ಲಿ ಹೊಟ್ಟೆನೋವು ತಿಂಗಳ ಕಾಲ ಅನುಭವಿಸುವ ಕರ್ಮ ಜಾರಿಗೆ ಬಂದಿದೆ. ಆದರೇ ಅವನು ದೇವರನ್ನು ಆಶ್ರಯಿಸಿ (ದೇವರ ಜ್ಞಾನವನ್ನು ಆಶ್ರಯಿಸಿ) ಇರುವುದರಿಂದ ಆತನಿಗೆ ಹೊಟ್ಟೆನೋವು ಒಂದು ದಿನ ಮಾತ್ರವಿದ್ದು ಉಳಿದ 29 ದಿನಗಳು ಇಲ್ಲದಂತೆ ಹೋಗಿದೆ. ಆಗ ಆತನು ತನಗಿರುವ ಜ್ಞಾನದ ಪ್ರಕಾರ ಅದು ಹೋಗಿದೆಯೆಂದಾಗಲೀ, ಶರೀರದೊಳಗೆ ದೇವರು ತನ್ನ ಕರ್ಮವನ್ನು ಕ್ಷಮಿಸಿದ್ದಾನೆಂದಾಗಲೀ ಅಂದುಕೊಳ್ಳುವುದಕ್ಕೆ ಅವಕಾಶವಿಲ್ಲ. ಆತನು ಬಳಸಿದ ಗುಳಿಗೆಯಿಂದ ಹೊಟ್ಟೆನೋವು  ಕಡಿಮೆಯಾಗಿದೆಯೆಂದು ಅಂದುಕೊಳ್ಳುತ್ತಾನೆ. ಆತನಿಗೆ ಪ್ರತ್ಯಕ್ಷವಾಗಿ ನುಂಗಿದ ಗುಳಿಗೆ ಕಾಣಿಸುತ್ತದೆ ಹೊರತು ಜ್ಞಾನದಿಂದ ಕ್ಷಮಾಪಣೆ ನಡೆದಿದೆಯೆಂದು ಅಂದುಕೊಳ್ಳುವುದಕ್ಕೆ ಅವಕಾಶವೇ ಇಲ್ಲ. ಅದೂ ಅಲ್ಲದೆ ಆತನಿಗೆ ತನ್ನ ಹೊಟ್ಟೆನೋವು ತಿಂಗಳ ಕಾಲ ಅನುಭವಿಸಬೇಕಾಗಿದೆಯೆನ್ನುವ ವಿಷಯವು ಸಹ ತಿಳಿದಿಲ್ಲ. ಆದ್ದರಿಂದ ತನ್ನ ನೋವು ಒಂದು ಗಂಟೆಯಲ್ಲಿ ಹೋದರೂ ಅಥವಾ ಒಂದು ದಿನದಲ್ಲಿ ಹೋದರೂ ನಮ್ಮ ಲೆಕ್ಕದಲ್ಲಿ ಅದು ಕರ್ಮ ಕ್ಷಮಾಪಣೆ ಅಥವಾ ಕರ್ಮ ದಹನ ಎಂದು ಹೇಳಬಹುದು. ಆ ವಿಷಯ ಹೊಟ್ಟೆನೋವು ಇರುವವನಿಗೆ ತಿಳಿದಿಲ್ಲ. ಆತನು ತನ್ನ ನೋವು ತಾನು ನುಂಗಿದ ಟಾಬ್ಲೆಟ್ (ಗುಳಿಗೆ) ಯಿಂದ ಹೋಗಿದೆ ಎಂದುಕೊಳ್ಳುವನು. ತಾನು ನಂಬಿದ ಜ್ಞಾನದಿಂದ ಹೋಗಿದೆ ಎಂದುಕೊಳ್ಳುವುದಿಲ್ಲ.

ಈ ವಿಧವಾಗಿ ಕರ್ಮ ದಹನ ನಡೆದರೂ ಅದು ಮನುಷ್ಯನಿಗೆ ತಿಳಿಯುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ದೇವರ ಮಾತು ಅಸತ್ಯವಾಗಿ ಕಾಣಿಸುವ ಅವಕಾಶವಿದೆ. ಹಾಗೆಯೇ ಶರೀರದ ಹೊರಗೆ ಕರ್ಮಗಳನ್ನು ಪಾಲಕರು ಶಿಕ್ಷಿಸದಂತೆ ದಹಿಸಿ ಹಾಕಿದರೂ, ಅವು ದೇವರು ಕ್ಷಮಿಸುವು ದರಿಂದ ಹೋಗಿವೆ ಎಂದಾಗಲೀ,  ದೈವ ಗ್ರಂಥದಲ್ಲಿ ಹೇಳಿದಂತೆ ಕರ್ಮ

ಸುಟ್ಟುಹೋಗಿದೆಯೆಂದಾಗಲೀ ಎನ್ನುವುದಕ್ಕೆ ಅವಕಾಶವಿಲ್ಲ. ತನಗಿರುವ ಕರ್ಮ ಸ್ವಲ್ಪವೇ ಎಂದು ಅಂದುಕೊಳ್ಳುತ್ತಾನೆ. ಈ ವಿಧವಾಗಿ ಸತ್ಯ ತಿಳಿಯದಂತೆ ಹೋಗುವುದಕ್ಕೆ ಅವಕಾಶವಿದೆ. ಮನುಷ್ಯ ಪ್ರತ್ಯಕ್ಷವಾಗಿ ಸ್ಥೂಲವಾಗಿ ಇರುವುದನ್ನೇ ಗಮನಿಸುತ್ತಾನೆ ಆದರೆ, ಪರೋಕ್ಷವಾಗಿ ಸೂಕ್ಷ್ಮವಾಗಿ ನಡೆಯುವ ವಿಷಯಗಳನ್ನು ಗ್ರಹಿಸಲಾರನು. ಅದರಿಂದ ಮನುಷ್ಯ ಜ್ಞಾನದೊಳಗೆ ಬರುವ ಅವಕಾಶ ಕಡಿಮೆಯಾಗುತ್ತದೆ. ಅಜ್ಞಾನಿಗಳಾಗಿ ಬದಲಾಗುವುದಕ್ಕೇ ಹೆಚ್ಚಿನ ಅವಕಾಶವಿರುತ್ತದೆ. ಹಾಗಿರುವಾಗ ಸ್ಥೂಲವಾಗಿ ನಡೆಯುವ ಕರ್ಮದಹನ ಮನುಷ್ಯರಿಗೆ ತಿಳಿಯುವಂತೆ ಮಾಡಿರೆಂದು ಕೋರಿದ್ದೇವೆ. ಹಾಗೆ ತಿಳಿಯುವುದರಿಂದ ಮನುಷ್ಯ ಕರ್ಮ ದಹನವನ್ನು ಗ್ರಹಿಸಿ ಭಗವದ್ಗೀತೆ ಜ್ಞಾನಯೋಗ 37ನೇ ಶ್ಲೋಕದಲ್ಲಿ ಹೇಳಿದ **'ಕರ್ಮದಹನ'** ಎನ್ನುವ ಮಾತು ಸತ್ಯವೆಂದು ತಿಳಿಯುತ್ತದೆ. ಹಾಗೆಯೇ ಬೈಬಲ್ ಗ್ರಂಥದಲ್ಲಿ ಹೇಳಿದ **'ಪಾಪಕ್ಷಮಾಪಣೆ'** ಎನ್ನುವ ವಾಕ್ಯವನ್ನು ನಂಬುವನು. ಹಾಗೆಯೇ ಖುರ್‌ಆನ್ ಗ್ರಂಥದಲ್ಲಿ ಹೇಳಿದ **'ದೇವರು ಕ್ಷಮಾಶೀಲನು'** ಎನ್ನುವ ಮಾತನ್ನು ವಿಶ್ವಾಸಿಸುವನು.

ಮಾನವನು ದೇವರ ಜ್ಞಾನವನ್ನು ತಿಳಿಯುವಂತೆ ಕರ್ಮದಹನ ವಿಷಯ ಸೂಕ್ಷ್ಮವಾಗಿ ಅಲ್ಲದೆ ಸ್ಥೂಲವಾಗಿ ತಿಳಿಯುವಂತೆ ದೇವರು ಮಾಡಬೇಕೆಂದು ಕೊಂಡಿದ್ದಾನೆಂದು ಆದ್ದರಿಂದ ಕರ್ಮದಹನ ಸ್ಥೂಲವಾಗಿ ನಡೆಯುವಂತೆ ಅದನ್ನು ಮನುಷ್ಯ ಗ್ರಹಿಸುವಂತೆ ಮಾಡಿದ್ದಾನೆ. ತಮ್ಮ ಕರ್ಮದಿಂದ ಹೊರಬಿದ್ದಂತೆ ತಿಳಿದ ಕೆಲವರು ದೇವರು ತಮ್ಮ ಕರ್ಮವನ್ನು ಕ್ಷಮಿಸಿದ್ದಾನೆಂದು, ತಮ್ಮ ಕರ್ಮವನ್ನು ಇಲ್ಲದಂತೆ ಮಾಡಿದ್ದಾನೆಂದು ಹೇಳಿಕೊಳ್ಳುವುದು ನೋಡಿ ನಾವು ಎಷ್ಟೋ ಸಂತೋಷಪಟ್ಟಿದ್ದೇವೆ. ಮನುಷ್ಯ ಪ್ರಪಂಚ ಸಂಬಂಧ ಕೋರಿಕೆಗಳನ್ನು ಕೋರದಂತೆ ದೈವ ಸಂಬಂಧ ಕೋರಿಕೆಗಳನ್ನು ಕೋರಬಹುದು. ದೈವಿಕವಾದ ಕೋರಿಕೆಗಳು ಕೋರುವವರನ್ನೇ ದೇವರು ಇಷ್ಟಪಡುತ್ತಾನೆ. ನಾನು ಕರ್ಮ ದಹನ ಸ್ಥೂಲವಾಗಿ ತಿಳಿದರೇ ಚೆನ್ನಾಗಿರುತ್ತದೆ, ಮನುಷ್ಯರಿಗೆ ಜ್ಞಾನವೊಂದರ

ಬೆಲೆ, ಪವಿತ್ರತೆ ತಿಳಿಯುತ್ತದೆ ಎಂದುಕೊಂಡಿದ್ದೇನೆ. ಆ ವಿಷಯ ದೇವರಿಗೂ ಸಹ ತಿಳಿದಿದೆ ಆದ್ದರಿಂದ ನನ್ನ ಕೋರಿಕೆಯನ್ನು ಆಲಿಸಿದ ದೇವರು ಹೊರಗಿನ ಕರ್ಮಗಳು ದಹಿಸುವುದು ಸ್ಥೂಲವಾಗಿ ತಿಳಿಯುವಂತೆ ಮಾಡಿದ್ದಾನೆ. ಸ್ಥೂಲವಾಗಿ ಹೇಗೆ ತಿಳಿಯುತ್ತದೆ? ಎಂದು ಕೆಲವರು ಪ್ರಶ್ನಿಸಬಹುದು. ಆದ್ದರಿಂದ ನನಗೆ ತಿಳಿದ, ನಾನು ನೋಡಿದ ಒಂದು ಯಥಾರ್ಥ ಸಂಘಟನೆ ಕುರಿತು ಈಗ ಹೇಳಿಕೊಳ್ಳೋಣ. ಅದಕ್ಕು ಮೊದಲು ನಾನು ಕೆಲವು ನೂರು ಸಂಘಟನೆಗಳನ್ನು ಕುರಿತು ಇತರರು ನನಗೆ ಹೇಳಿದಾಗ ಕೇಳಿದ್ದೇನೆ ಆದರೇ, ಪ್ರತ್ಯಕ್ಷವಾಗಿ ನಾನು ನೋಡಲಿಲ್ಲ. ಬಹಳ ಜನ ನನಗೆ ಹೇಳುವುದಕ್ಕಿಂತ ದೃಶ್ಯರೂಪವಾಗಿ ತೋರಿಸುವುದು ಒಳ್ಳೆಯದೆಂದು ವೀಡಿಯೋ ಚಿತ್ರಗಳು, ಫೋಟೋಗಳು ತಂದು ತೋರಿಸಿದ್ದಾರೆ. ಆದರೇ ನಾನು ಅದನ್ನು ಕುರಿತು ಹೆಚ್ಚಾಗಿ ಆಲೋಚಿಸಲಾರದೆ ಹೋಗಿದ್ದೇನೆ. ನಾನು ಹೆಚ್ಚಿನ ಕಾಲ ಗ್ರಂಥರಚನೆಯಲ್ಲಿ ಕಳೆಯುವುದರಿಂದ ನಾನು ನೋಡಿದ ವೀಡಿಯೊ ಚಿತ್ರಗಳನ್ನು ಕುರಿತು, ಫೋಟೋ ಚಿತ್ರಗಳನ್ನು ಕುರಿತು ಕಾರಣವನ್ನಾಗಲೀ, ಶಾಸ್ತ್ರೀಯತೆಯನ್ನಾಗಲೀ, ವಾಸ್ತವಿಕತೆಯನ್ನಾಗಲೀ ಆಲೋಚಿಸಲಾರದೇ ಹೋಗಿದ್ದೇನೆ. ಒಂದು ದಿನ ಒಬ್ಬ ಮುಸ್ಲಿಮ್ ವ್ಯಕ್ತಿ ನನಗೆ ಪರಿಚಯವಿರುವ ಮತ್ತೊಬ್ಬ ಮನುಷ್ಯನೊಂದಿಗೆ ಭೇಟಿಯಾಗುವುದು ನಡೆದಿದೆ. ಬಂದಿರುವ ಮುಸ್ಲಿಮ್ ವ್ಯಕ್ತಿ ಐದು ದಿನಗಳಾಗಲೀ ಅಥವಾ ಒಂಬತ್ತು ದಿನಗಳಾಗಲೀ ಇಲ್ಲೇ ಇದ್ದು ಹೋಗಿದ್ದಾನೆ. ಎಷ್ಟು ದಿನಗಳು ಇದ್ದಾನೆನ್ನುವುದು ನನಗೆ ಈಗ ಜ್ಞಾಪಕವಿಲ್ಲ. ಬಹುಶಃ ಐದು ದಿನಗಳೇ ಎಂದುಕೊಳ್ಳೋಣ.

ಶರೀರ ಆರೋಗ್ಯಗಳು ಸರಿಯಾಗಿ ಇಲ್ಲದವರು, ಅನೇಕ ಆರೋಗ್ಯ ಸಮಸ್ಯೆಗಳಿರುವವರು ಕೃಷ್ಣಮಂದಿರದಲ್ಲಿ 3, 5, 9 ದಿನಗಳು ನಿದ್ರೆ ಮಾಡಿ ಹೋಗುತ್ತಿರುವರು. ಕೆಲವು ದಿನಗಳು ಇಲ್ಲೇ ಇದ್ದು ಇಲ್ಲಿ ಕೆಲಸ ಸೇವೆರೂಪದಲ್ಲಿ ಮಾಡುವುದರಿಂದ ಅವರ ಆರೋಗ್ಯ ಸಮಸ್ಯೆಗಳು ಇಲ್ಲದಂತೆ ಹೋಗುವವೆಂದು ನಂಬಿಕೆ. ಅದೇ ನಂಬಿಕೆಯಿಂದ ಮುಸ್ಲಿಮ್ ಕುಟುಂಬ ಎಂದರೇ ಸುಮಾರು 60 ವರ್ಷಗಳಿರುವ ಆತನು, ಆತನ ಹೆಂಡತಿ ಇಬ್ಬರೂ ಬರುವುದು ನಡೆದಿದೆ.

ಆಗ ನಾನು ಮಂದಿರದಲ್ಲಿಯೇ ಇದ್ದರೂ ನನ್ನ ರೂಮ್‌ನಲ್ಲಿಯೇ ನಾನು ಇರುತ್ತೇನೆ. ನನ್ನ ಹತ್ತಿರಕ್ಕೆ ಯಾರೂ ಬರುವುದಿಲ್ಲ. ನಾನು ಹೊರಗೆ ಹೋಗುವುದಿಲ್ಲ. ಮುಸ್ಲಿಮ್ ವ್ಯಕ್ತಿಯನ್ನು ಕರೆದುಕೊಂಡು ಬಂದಿರುವ ವ್ಯಕ್ತಿ ನನ್ನೊಂದಿಗೆ ಭೇಟಿಯಾಗಿ ಮಾತನಾಡುವುದಕ್ಕೆ ಅಪ್ಪಣೆ ಕೇಳಿದಾಗ ನಾನು ಅನುಮತಿ ಕೊಡುವುದು, ಆತನು ನನ್ನ ಹತ್ತಿರಕ್ಕೆ ಬಂದು ಮಾತನಾಡುವುದು ನಡೆದಿದೆ. ಆಗ ಆತನ ಹಿಂದೆ ಬಂದಿರುವ ಮುಸ್ಲಿಮ್‌ನನ್ನು ಕುರಿತು ಹೇಳುವುದು ನಡೆದಿದೆ. ನನ್ನ ಹತ್ತಿರಕ್ಕೆ ಬಂದಿರುವ ವ್ಯಕ್ತಿ ಉನ್ನತ ಪಾಠಶಾಲೆ (ಹೈಸ್ಕೂಲ್) ನಲ್ಲಿ ಟೀಚರ್ ಆಗಿ ಕೆಲಸ ಮಾಡುತ್ತಿದ್ದಾನೆ. ಆತನ ಹಿಂದೆ ಬಂದಿರುವ ಆತನು ಕೂಡಾ ಟೀಚರ್ ಕೆಲಸ ಮಾಡುತ್ತಿದ್ದಾನೆ. ಅದೇ ಸ್ಕೂಲ್‌ನಲ್ಲಿ ಮಾಡುವುದರಿಂದ ಇಬ್ಬರಿಗೆ ಪರಿಚಯವಿದೆ.

ಆ ಇಬ್ಬರು ಟೀಚರ್‌ಗಳು ನೆಲ್ಲೂರ್ ಜಿಲ್ಲೆ, ಆತ್ಮಕೂರಿನಲ್ಲಿ ಉದ್ಯೋಗ ಮಾಡುತ್ತಿದ್ದಾರೆ. ಮುಸ್ಲಿಮ್‌ರಿಗೆ ಸುಮಾರು ಕೆಲವು ಸಂವತ್ಸರಗಳಿಂದ ಹೊಟ್ಟೆಯಲ್ಲಿ ಕ್ಯಾನ್ಸರ್ ರೋಗವಿದ್ದಂತೆ, ಆತನು ಮೂರು, ನಾಲ್ಕು ವರ್ಷಗಳಿಂದ ಅನಾರೋಗ್ಯದಿಂದ ಬಳಲುತ್ತಾ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಮಾಡಿಸಿಕೊಳ್ಳುವುದು, ಇಲ್ಲಿಗೆ ಸುಮಾರು 15ಲಕ್ಷ ರೂಪಾಯಿಗಳು ಖರ್ಚಾಗಿವೆಯೆಂದು, ಆದರೂ ಅದು ಗುಣವಾಗಲಿಲ್ಲವೆಂದು ಆತನು ಸ್ಕೂಲ್‌ಗೆ ಬಂದು ಕುಳಿತುಕೊಳ್ಳಲು ತಾಳ್ಮೆ ಇಲ್ಲದೇ ಮಲಗುತ್ತಿದ್ದನೆಂದು, ಆತನ ಪರಿಸ್ಥಿತಿ ನೋಡಿದ ಎಲ್ಲರೂ ಆತನಿಗೆ ಸಹಕರಿಸುತ್ತಿದ್ದರೆಂದು, ಸ್ಕೂಲ್‌ಗೆ ಬಂದು ಹೋದರೂ ಅಟೆಂಡೆನ್ಸ್ ಹಾಕಿ ಸಂಬಳ ಕೊಡುತ್ತಿದ್ದರೆಂದು, ಆತನು ರೋಗದಿಂದ ಬಾಧೆಪಡುತ್ತಿದ್ದರೇ ನೋಡಲಾರದೇ ನನ್ನ ಹತ್ತಿರಕ್ಕೆ ಬಂದಿರುವ ಮನುಷ್ಯ ನಾನು ಬರೆದ ಒಂದು ಗ್ರಂಥವನ್ನು ಆತನಿಗೆ ಬಾಧೆ ಇರುವ ಕಡೆ ಹೊಟ್ಟೆಯ ಮೇಲೆ ಇಟ್ಟಾಗ, ಆ ಗ್ರಂಥ ಹೊಟ್ಟೆಗೆ ಅಂಟಿಕೊಂಡು ಹೋಗಿದೆಯೆಂದು ಹೇಳಿದ್ದಾರೆ. ಹೊಟ್ಟೆಗೆ ಅಂಟಿಕೊಂಡು ಹೋಗಿರುವ ಗ್ರಂಥ ಸುಮಾರು ಎಂಟು ಗಂಟೆಗಳ ಸಮಯ ಅಂಟಿಕೊಳ್ಳುವುದು ನಡೆದಿದೆ. ಎಂಟುಗಂಟೆಗಳ ನಂತರ ಆತನಿಗೆ ಹೊಟ್ಟೆಯಲ್ಲಿ

ನೋವು ಹೋಗಿದೆ. ಹೊಟ್ಟೆ ನೋವು ಹೋದ ನಂತರ ಗ್ರಂಥವು ಹೊಟ್ಟೆಯಿಂದ ಕಳಚಿ ಬಿದ್ದಿದೆ. ಅದೆಲ್ಲಾ ಗ್ರಂಥ ಕೊಟ್ಟಿರುವ ಸುಧಾಕರಚಾರಿಗೆ, ಗ್ರಂಥ ಅಂಟಿಕೊಂಡಿರುವ ಮುಸ್ಲಿಮ್‌ಗೆ ಆಶ್ಚರ್ಯವಾಗಿ ಕಾಣಿಸಿತು. ಪ್ರತಿ ದಿನ ಕ್ಯಾನ್ಸರ್ ರೋಗದಿಂದ ಬಾಧೆಪಡುವ ಮಹಬೂಬ್ ಭಾಷಾರವರಿಗೆ ಅಂದಿನಿಂದ ಹೊಟ್ಟೆಯಲ್ಲಿ ನೋವು ಬರಲಿಲ್ಲವಂತೆ. ಪ್ರತ್ಯಕ್ಷವಾಗಿ ಗ್ರಂಥ ಹೊಟ್ಟೆಯಮೇಲೆ ಏಕಧಾಟಿಯಾಗಿ ಎಂಟು ತಾಸು ಅಂಟಿಕೊಂಡಿದ್ದು ಒಳಗೆ ಬಾಧೆಯಾಗಿದ್ದ ಕರ್ಮವನ್ನು ಇಲ್ಲದಂತೆ ಮಾಡುವುದು ಅವರಿಗೆ ಆಶ್ಚರ್ಯ ಮತ್ತು ಅದ್ಭುತವಾಗಿ ಕಾಣಿಸಿತು. ಆತನ ಹೊಟ್ಟೆಗೆ ನನ್ನ ಗ್ರಂಥ ಅಂಟಿಕೊಂಡಿರುವ ಫೋಟೋವನ್ನು ನನಗೆ ತೋರಿಸಿದ್ದಾರೆ.

ಹೊಟ್ಟೆಯಲ್ಲಿನ ಬಾಧೆ ಕಾಣಿಸದಂತೆ ಹೋದ ತಿಂಗಳ ನಂತರ ಅವರು ಆಶ್ರಮದಲ್ಲಿ ನಿದ್ದೆ ಮಾಡಿದರೆ ಒಳ್ಳೆಯದೆಂದು ಇಲ್ಲಿಗೆ ಬರುವುದು ನಡೆದಿದೆ. ಆ ವಿಷಯವೆಲ್ಲಾ ನನ್ನ ಹತ್ತಿರಕ್ಕೆ ಬಂದು ಮಾತನಾಡಿದ ವ್ಯಕ್ತಿ ಹೇಳಿದಾಗ ನಾನು ಕೇಳಿದ್ದೇನೆ. ನಂತರ ಆತನು ಪುನಃ ಆತನ ಊರಿಗೆ ಹೋಗುವ ದಿನದಂದು ಆತನನ್ನು ಕರೆದು ಮಾತನಾಡಿದ್ದೇನೆ. ಆಗ ಆತನ ಹೆಸರು ಮಹಬೂಬ್ ಭಾಷಾ ಎಂದು ಹೇಳಿ ತನಗೆ ನಡೆದ ವಿಷಯವನ್ನೆಲ್ಲಾ ಹೇಳಿದ್ದಾನೆ. ಅದರಿಂದ ಅವರು ಹೇಳಿರುವುದೆಲ್ಲಾ ವಾಸ್ತವವೆಂದು ನನಗೆ ಅರ್ಥವಾಗಿದೆ. ಅಲ್ಲಿಯವರೆಗು ಆ ವಿಷಯದ ಮೇಲೆ ದೃಷ್ಠಿ ಹಾಯಿಸದ ನಾನು ಸ್ವಲ್ಪ ಆಲೋಚನೆ, ಸ್ವಲ್ಪ ಲೋಚನೆ ಮಾಡಿದಾಗ ಇನ್ನೂ ಸ್ವಲ್ಪ ಯೋಚನೆಯಾಗಿ ತಿಳಿದಿದೆ. ಮುಸ್ಲಿಮ್ ನನಗೆ ತೋರಿಸಿದ ಫೋಟೋ ಪದೇಪದೇ ನೆನಪಿಗೆ ಬರುತ್ತಿತ್ತು. ಆದ್ದರಿಂದ ನಾನು ಆ ವಿಷಯವನ್ನು ಲೋಚನೆ ಯೋಚನೆವರೆಗು ತೆಗೆದುಕೊಂಡು ಹೋಗಿದ್ದೇನೆ. ಆ ಫೋಟೋವನ್ನು 127ನೇ ಪುಟದಲ್ಲಿ ಮೊದಲಿನಲ್ಲಿಯೇ ನೋಡಬಹುದು. 127ನೇ ಪುಟದಿಂದ 142ನೇ ಪುಟದವರೆಗು ಇನ್ನೂ ಕೆಲವು ಫೋಟೋಗಳನ್ನು ಸಹ ನೀವು ನೋಡಬಹುದು.

ನಾನು ನೋಡಿದ ಫೋಟೋ ಒಬ್ಬ ಮುಸ್ಲಿಮ್‌ನದ್ದು, ಅಂಟಿಕೊಂಡಿರುವ ಗ್ರಂಥ ಹಿಂದೂಗಳದ್ದು. ದೇವರಿಗೆ ಮತವಿಲ್ಲ. ಮನುಷ್ಯರಾದ ನಾವು ಮತವನ್ನು ಇಟ್ಟುಕೊಂಡಿದ್ದೇವೆ. ಮನುಷ್ಯರೆಲ್ಲರೂ ದೇವರ ದೃಷ್ಟಿಯಲ್ಲಿ ಒಂದೇ. ದೇವರು ಮನುಷ್ಯರ ಮತವನ್ನು ನೋಡಲಿಲ್ಲ. ಅವರ ವಿಶ್ವಾಸವನ್ನು ನೋಡುತ್ತಿದ್ದಾನೆ. ಒಬ್ಬ ಮುಸ್ಲಿಮ್ ದೇವರ ಮೇಲಿನ ವಿಶ್ವಾಸದಿಂದ ದೇವರ ಜ್ಞಾನವಿರುವ ಗ್ರಂಥವನ್ನು ತನ್ನ ಹೊಟ್ಟೆಯ ಮೇಲೆ ಇಟ್ಟುಕೊಂಡಾಗ, ಅದು ಅಂಟುಹಾಕಿ ಅಂಟಿಸಿದ ಹಾಗೆ ಅಂಟಿಕೊಂಡಿದೆ. ಅದು ಎಲ್ಲರಿಗೂ ಕಾಣಿಸುವ ದೃಶ್ಯವೇ. ಹಾಗೆ ಕಾಣಿಸುವ ದೃಶ್ಯಗಳಲ್ಲಿ ಮೂರು ಮತದವರ ಫೋಟೋಗಳು ಇವೆ. ಒಂದು ಗ್ರಂಥ ಮನುಷ್ಯನಿಗೆ ಅಂಟಿಕೊಳ್ಳುವವರೆಗೇ ಆದರೆ ಅದನ್ನು ಮಂತ್ರವೋ, ತಂತ್ರವೋ ಎಂದು ಸರಿಮಾಡಬಹುದು. ಹಾಗೆ ಅಂಟಿಕೊಳ್ಳುವುದೇ ಅಲ್ಲದೆ ಆ ಕಾರ್ಯದ ಹಿಂದೆ ಆಧ್ಯಾತ್ಮಿಕ ರಹಸ್ಯ ಒಳಗೊಂಡಿದೆ. ಯಾವ ಮನುಷ್ಯನಿಗಾದರೇ ಗ್ರಂಥ ಅಂಟಿಕೊಂಡು ಹಾಗೆಯೇ ನಿಂತುಹೋಗಿದೆಯೋ ಆ ದೃಶ್ಯದಹಿಂದೆ ಎಲ್ಲರ ಬುದ್ಧಿಗು ತಿಳಿಯದ ಒಂದು ಘನಕಾರ್ಯ ನಡೆಯುತ್ತಿದೆ. ಗ್ರಂಥ ಅಂಟಿಕೊಳ್ಳುವುದು ಹೊರಗಿನ ಪ್ರಪಂಚದಲ್ಲಿ ಒಂದು ವಿಚಿತ್ರವೇ. ಚಿಕ್ಕ ಗ್ರಂಥವಾದರೇ ಏನೋ ಅಂದುಕೊಳ್ಳಬಹುದು. ಹಾಗಲ್ಲದೇ 800 ಪುಟಗಳ ಗ್ರಂಥಗಳು ಕನಿಷ್ಟ 1ಕೇಜಿಯಿಂದ ಸುಮಾರು 2 ಕೇಜೀಗಳ ಭಾರವಿರುವ ಗ್ರಂಥಗಳು ಭೂಮಿ ಆಕರ್ಷಣೆಗೆ ಕೆಳಗೆ ಬೀಳದಂತೆ, ಭೂಮಿ ಆಕರ್ಷಣೆಗೆ ವಿರುದ್ಧವಾಗಿ ನಿಲ್ಲುವುದು ಯಾರಿಗಾದರೂ ಆಶ್ಚರ್ಯವಿಷಯವಾಗಿ ಕಾಣಿಸುತ್ತದೆ. ಇದಕ್ಕೆ ಹೇತುವಾದಿಗಳೆನ್ನುವ ನಾಸ್ತಿಕವಾದಿಗಳು ಮೋಸ, ವಂಚನೆಯೆಂದೋ, ಪ್ರಚಾರಕ್ಕಾಗಿ ಯಾವುದರಿಂದಲೋ ಅಂಟಿಸಿ ತೋರಿಸುತ್ತಿದ್ದಾರೆಂದು ಅಂದುಕೊಳ್ಳಬಹುದು. ಸರಿ ಅವರ ಮಾತಿನ ಪ್ರಕಾರವೇ ಕಾಣಿಸುವ ದೃಶ್ಯ ಮೋಸ, ವಂಚನೆ ಆಗಬಹುದು. ಆದರೇ ಅಲ್ಲಿ ಕಾಣಿಸದೆ ನಡೆಯುವ ಕಾರ್ಯವನ್ನು ಕುರಿತು ಯಾರೂ ಯಾವ ವಿವರಣೆಯನ್ನು ಕೊಡಲಾರರು. ಅಲ್ಲಿ ಕಾಣಿಸದೆ ನಡೆಯುವ ಕಾರ್ಯವನ್ನು ಕುರಿತು ನಾವು ಸ್ವತಃವಾಗಿ ಆಲೋಚಿಸುವುದು ನಡೆದಿದೆ. ನಮ್ಮ ಗ್ರಾಹಿತ ಶಕ್ತಿ ಲೋಚನೆ, ಯೋಚನೆವರೆಗು ಹೋಗುವವರೆಗು

ನಮಗೆ ಅರ್ಥವಾಗಲಿಲ್ಲ. ಆದ್ದರಿಂದ ಈ ವಿಷಯವನ್ನು ಯಾರೂ ಆರೋಪಿಸಲಾರರು.

ಈಗ ಅಸಲು ವಿಷಯಕ್ಕೆ ಬರೋಣ. ಈ ವಿಷಯವನ್ನು ನಾನು ಕೇಳಿದರೂ, ಕೆಲವು ಫೋಟೋಗಳನ್ನು ನೋಡಿದರೂ ತೀವ್ರವಾಗಿ ತೆಗೆದುಕೊಂಡು, ಅದನ್ನು ಕುರಿತು ಆಲೋಚಿಸಲಿಲ್ಲ. ಈಗ ಪರಮತಸ್ಥನೆಂದು ಹೇಳಿಕೊಳ್ಳುವ ಮಹಬೂಬ್ ಭಾಷಾರವರು ಅನಾರೋಗ್ಯವನ್ನು ಕುರಿತು, ಆತನು ಖರ್ಚು ಮಾಡಿರುವುದನ್ನು ಕುರಿತು ವಿವರವಾಗಿ ಹೇಳಿದಾಗ ನನಗೆ ಸ್ವಲ್ಪಮಟ್ಟಿಗೆ ಅದರ ಮೇಲೆ ಗಮನ ಹರಿಯಿತು. ಕೆಲವು ವರ್ಷಗಳಿಂದ ಇರುವ ರೋಗ ಒಂದು ಆಧ್ಯಾತ್ಮಿಕ ಗ್ರಂಥ ಅಂಟಿಕೊಂಡು ಕೆಲವು ಗಂಟೆಗಳವರೆಗು ಬಿಡದೇ ಇರುವುದು, ನಂತರ ಆತನ ರೋಗ ಇಲ್ಲದಂತೆ ಹೋಗುವುದನ್ನು ಅನುಸರಿಸಿ ಇದರ ಹಿಂದೆ ಕಾಣಿಸದ ವಿಧಾನ ಏನು ನಡೆಯುತ್ತಿದೆಯೆಂದು ನೋಡಬೇಕಾಗಿ ಬಂದಿದೆ. ಮುಖ್ಯವಾಗಿ ಗಮನಿಸಬೇಕಾಗಿರುವ ವಿಷಯವೇನೆಂದರೇ! ಇಲ್ಲಿ ನಮ್ಮಿಂದ ಬರೆಯಲ್ಪಟ್ಟ ಗ್ರಂಥಗಳು, ನಾವು ಬಿಡುಗಡೆ ಮಾಡಿದ ಗ್ರಂಥಗಳು ಮಾತ್ರ ಹಾಗೆ ಮಾಡುತ್ತಿವೆ. ನಾವು ಬರೆದ ಗ್ರಂಥ ಯಾವ ಮತಕ್ಕೆ ಸಂಬಂಧಿಸಿರುವುದಾಗಲೀ, ಬಾಧೆಪಡುವ ವ್ಯಕ್ತಿ ಯಾವ ಮತಸ್ಥನಾದರೂ ಆಗಲೀ ಆತನ ಬಳಿ ಆ ಗ್ರಂಥ ಸ್ಪಂಧಿಸಿ ಆತನ ಕರ್ಮ ನಿವಾರಣೆಗೆ, ಕರ್ಮ ಕ್ಷಮಾಪಣೆಗೆ, ಕರ್ಮ ದಹನಕ್ಕೆ ಕೆಲಸಮಾಡುತ್ತಿದೆ. ನೀವು ಫೋಟೋದಲ್ಲಿ ನೋಡಿದ ಮಹಬೂಬ್ ಬಾಷಾರವರು ತನ್ನ ಅನುಭವವನ್ನು ಹೇಳಿದಾಗ ಕೇಳಿದ್ದೇನೆ. ಅಲ್ಲಿಯವರೆಗು ಆ ವಿಷಯವನ್ನು ಕುರಿತು ನೋಡದ ನಾವು ಆಳವಾಗಿ ನೋಡಬೇಕಾಗಿ ಬಂದಿದೆ. ಈ ವಿಷಯ ನಾನು ತಿಳಿದರೂ, ತಿಳಿಯದೇ ಹೋದರೂ ಪರವಾಗಿಲ್ಲ. ಆದರೇ ಇತರರಿಗೆ ಏನು ನಡೆಯುತ್ತಿದೆಯೆಂದು ತಿಳಿಯುವುದು ಅಗತ್ಯ. ಮೂರು ದೈವ ಗ್ರಂಥಗಳಲ್ಲಿ ದೇವರು ಕರ್ಮದ ಬಳಿ ಹೇಗೆ ಕ್ಷಮಿಸುತ್ತಾನೆ? ಎನ್ನುವ ವಿಷಯ ಜ್ಞಾನರೀತಿಯಲ್ಲಿ ಎಲ್ಲರಿಗೂ ತಿಳಿಯಬೇಕೆಂದರೆ ಇದರಲ್ಲಿ ಎಲ್ಲರಿಗೂ ತಿಳಿಯದಂತೆ ನಡೆಯುವ ಪ್ರಕ್ರಿಯೆವೊಂದರ ರಹಸ್ಯವನ್ನು ಬೇರ್ಪಡಿಸಿ ಅರ್ಥವಾಗುವಂತೆ ಹೇಳಬೇಕು.

ಇದಕ್ಕೂ ಮೊದಲು ಬರೆದ ಬರಹದಲ್ಲಿ ಮನುಷ್ಯ ದೇವರ ಮೇಲೆ, ದೇವರ ಜ್ಞಾನದ ಮೇಲೆ ವಿಶ್ವಾಸವನ್ನು ಹೊಂದಿದ್ದರೇ ಶರೀರದೊಳಗೆ, ಶರೀರದ ಹೊರಗೆ ಪಾಪ ಕ್ಷಮಾಪಣೆ ನಡೆಯುತ್ತದೆಂದು ಹೇಳಿದ್ದೇವೆ. ಶರೀರದ ಹೊರಗೆ ದೇವರ ರಾಜ್ಯವಾದ ಪ್ರಕೃತಿಯಲ್ಲಿ ಪಾಲಕರಾಗಿರುವ ಭೂತಗಳು, ಗ್ರಹಗಳು ಪ್ರತ್ಯೇಕ ಶಕ್ತಿಗಳು ಹೊಂದಿ, ಪ್ರತ್ಯೇಕವಾದ ಆಕಾರಗಳು ಹೊಂದಿದ್ದು ಕರ್ಮಗಳನ್ನು ಅನುಭವಿಸುವಂತೆ ಮಾಡುವುದಲ್ಲದೆ, ದೇವರನ್ನು, ದೇವರ ಜ್ಞಾನವನ್ನು ನಂಬಿದವರ ಪಾಪ ಕರ್ಮಗಳನ್ನು ಕ್ಷಮಿಸಿ ಅನುಭವಕ್ಕೆ ಬಾರದಂತೆ ದಹಿಸಿ ಹಾವ ಸಾಮರ್ಥ್ಯ, ಅಧಿಕಾರ ಹೊಂದಿದ್ದಾರೆಂದು ಹೇಳಿದ್ದೇವೆ. ಆದರೇ ಆ ವಿಧಾನ ನಡೆದರೂ ನಂಬುವಂತದ್ದಾಗಿ ಇಲ್ಲವೆಂದು, ಅದು ಪ್ರತ್ಯಕ್ಷವಾಗಿ ಸ್ಥೂಲವಾಗಿ ನಡೆದರೇ ಚೆನ್ನಾಗಿರುತ್ತದೆಂದು, ಎಲ್ಲರೂ ದೈವ ಶಕ್ತಿಯನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಅವಕಾಶವಿರುತ್ತದೆಂದು ದೇವರನ್ನು ಕೋರುವುದು ನಡೆದಿದೆ. ನಾನು ಕೋರಿಕೆಗಳನ್ನು ಕೋರುವವನಲ್ಲ. ಆದರೇ ನಾನು ಕೋರಿರುವುದು ನನಗೆ ಸಂಬಂಧಿಸಿದ ಕೋರಿಕೆಯಲ್ಲ. ದೇವರಿಗೆ ಸಂಬಂಧಿಸಿದ ಜ್ಞಾನ ಇತರರಿಗೆ ಸುಲಭವಾಗಿ ತಿಳಿಯುವ ವಿಧಾನವನ್ನು ಕೋರಿದ್ದೇನೆ. ಆದ್ದರಿಂದ ಇದು ಪ್ರಜೆಗಳೆಲ್ಲರ ಕೋರಿಕೆ ಎಂದು, ದೇವರನ್ನು ವಿಶ್ವಾಸಿಸುವವರೆಲ್ಲರ ಕೋರಿಕೆ ಎಂದು ತಿಳಿದಿದ್ದೇವೆ. ಇದು ನನ್ನೊಬ್ಬನದ್ದಲ್ಲವೆಂದು ಭಕ್ತರೆಲ್ಲರ ಕೋರಿಕೆಯೆಂದು ತಿಳಿದ ದೇವರು ನನ್ನ ಕೋರಿಕೆಯನ್ನು ನನ್ನ ಹತ್ತಿರವೇ, ನನ್ನ ಗ್ರಂಥಗಳ ಹತ್ತಿರವೇ ತೋರಿಸುವುದು, ನೆರವೇರಿಸುವುದು ನಡೆದಿದೆ. ಇದು ಪ್ರಪಂಚ ವಿಷಯವಲ್ಲ, ದೇವರ ವಿಷಯ. ಆದ್ದರಿಂದ ಜಾಗ್ರತೆಯಿಂದ ಗಮನಿಸಬೇಕು.

ಪ್ರಕೃತಿಯೆಲ್ಲವೂ ಆಕಾಶದಿಂದ ಭೂಮಿಯವರೆಗು ವ್ಯಾಪಿಸಿದ ಭೂತಗಳು, ಗ್ರಹಗಳಲ್ಲಿ ಮುಖ್ಯರಾದ ಕೆಲವರು ಬಂದು ನನ್ನ ಹತ್ತಿರ ಇರುತ್ತಾರೆ. ನನ್ನ ಹಸ್ತದಿಂದ ಬರೆಯಲಾಗಿರುವ ಜ್ಞಾನವಿರುವ ಗ್ರಂಥವು ಪೂರ್ತಿಯಾಗಿ ತಯಾರಾದನಂತರ, ಆ ಗ್ರಂಥದ ಮೊದಲ ಪ್ರತಿ ನನ್ನ ಹತ್ತಿರಕ್ಕೆ ಬಂದಾಗ ನಾನು ಒಂದು ಬಾರಿ ಆ ಗ್ರಂಥವನ್ನು ನೋಡಿದ ನಂತರ, ನನ್ನ ಹತ್ತಿರವಿರುವ

ಪಾಲಕರು ಮೊದಲು ನಾನು ನೋಡಿದ ಪ್ರತಿಯಲ್ಲಿ ಪ್ರವೇಶಿಸುತ್ತಾರೆ. ನಂತರ ಉಳಿದವರೆಲ್ಲರೂ ನನ್ನ ಹತ್ತಿರ ತಯಾರಾದ ಪ್ರತಿ ಗ್ರಂಥದಲ್ಲಿಯೂ ಒಬ್ಬೊಬ್ಬರು ಒಂದೊಂದು ಗ್ರಂಥದಲ್ಲಿ ಪ್ರವೇಶಿಸುತ್ತಾರೆ. ಈ ವಿಷಯ 1980ನೇ ವರ್ಷದಿಂದ ನಡೆಯುತ್ತಿದ್ದರೂ ಈ ವಿಷಯ ನನಗೆ ವಾಸ್ತವವಾಗಿ ತಿಳಿದಿಲ್ಲ. ಒಂದು ಗ್ರಂಥ ಸಾವಿರ ಪ್ರತಿಗಳು ತಯಾರಾದರೆ ಸಾವಿರ ಮಂದಿ ಪಾಲಕರು ಬಂದು ಗ್ರಂಥದಲ್ಲಿ ಪ್ರವೇಶಿಸುವುದು ನಡೆಯುತ್ತಿರುವ ಕಾರ್ಯವೇ. 2008ನೇ ವರ್ಷ **"ದೆವ್ವಗಳ-ಭೂತಗಳ ಯಥಾರ್ಥ ಸಂಘಟನೆಗಳು"** ಎನ್ನುವ ಗ್ರಂಥವನ್ನು ಬರೆದು ಸಾವಿರ ಪ್ರತಿಗಳನ್ನು ತಯಾರಿಸುವುದು ನಡೆದಿದೆ. ಆಗ ಐದು ಸಾವಿರ ಪಾಲಕರು ಒಂದೇ ಸಲ ಆ ಗ್ರಂಥಗಳಲ್ಲಿ ಸೇರಿಹೋಗುವುದು ನಡೆದಿದೆ. ಆಗ ಆ ಗ್ರಂಥ ಯಾರ ಮನೆಯಲ್ಲಿ ಸೇರಿದರೂ, ಯಾರು ಓದಿದರೂ, ಓದಿದವರಿಗೆ ಅಲ್ಲಿಯವರೆಗಿರುವ ದೀರ್ಘಕಾಲ ರೋಗಗಳು ಸಹಿತ ಗುಣವಾಗುವುದು ನಡೆದಿದೆ. ಆ ಮನೆಯಲ್ಲಿ ಆರೋಗ್ಯ ಸಮಸ್ಯೆಗಳು ಕೆಲವು ನಿವಾರಣೆ ಯಾಗುತ್ತಿದ್ದವು. ಆಗಲೇ ಬಹಳ ಜನ ಈ ವಿಷಯವನ್ನು ಹೇಳುತ್ತಾ ಬಂದಿದ್ದಾರೆ. ಕೆಲವು ಮುಖ್ಯವಾದ ಕರ್ಮ ನಿವಾರಣೆ ನಡೆದ ವಿಷಯಗಳನ್ನು ನಾನು ಕೇಳಿದರೂ, ಆಗ ಆ ವಿಷಯಗಳ ಮೇಲೆ ಶ್ರದ್ಧೆ ತೋರಿಸಲಿಲ್ಲ. ನಾನು ಗ್ರಂಥ ರಚನೆಗಳಮೇಲೆ ಲಗ್ನವಾಗಿರುವುದೇ ಅದಕ್ಕೆ ಕಾರಣವಾಗಿರಬಹುದು.

ಈ ಮಧ್ಯಕಾಲದಲ್ಲಿ ಮಹಬೂಬ್ ಭಾಷಾ, ಬಹುಶಃ ಮೂರು ವರ್ಷಗಳ ಕೆಳಗೆ ನನ್ನೊಂದಿಗೆ ಭೇಟಿಯಾಗಿ ಮಾತನಾಡಿದಾಗ ಹೊಂದಿದ ಸಂತೋಷವನ್ನು ವ್ಯಕ್ತ ಮಾಡಿದಾಗ ಹಿಂದಿನ ಕಾಲದಲ್ಲಿ ಬಹಳ ಜನ ತಮ್ಮ ರೋಗಗಳು ಹೋದ ವಿಧಾನವನ್ನು ಹೇಳಿದ ವಿಷಯಗಳೆಲ್ಲವೂ ನನಗೆ ಜ್ಞಾಪಕ ಬರತೊಡಗಿದವು. ಈ ಮಧ್ಯಕಾಲದಲ್ಲಿ ಗ್ರಂಥಗಳು ಅಂಟಿಕೊಂಡಿರುವುದು ವೀಡಿಯೋಗಳಲ್ಲಿ, ಫೋಟೋಗಳಲ್ಲಿ ನೋಡುವುದೇ ಹೊರತು ಪ್ರತ್ಯಕ್ಷವಾಗಿ ನೋಡಲಿಲ್ಲ. ಆದರೇ ನನ್ನ ಮುಂದೆಯೇ ಕತ್ತು ನೋವಿನಿಂದ ಬಾಧೆಪಡುವ ವ್ಯಕ್ತಿ ಕತ್ತಿನ ಕೆಳಗಿನ ಭಾಗದಲ್ಲಿ **"ಮಂತ್ರ – ಮಹಿಮೆ"** ಎನ್ನುವ ಗ್ರಂಥವನ್ನು

ಇಟ್ಟಾಗ ಅದು ಅಂಟಿಕೊಳ್ಳುವುದು ನಡೆದಿದೆ. ನೀವು ನೋಡಿದ 32 ಫೋಟೋಗಳಲ್ಲಿ ಆ ಫೋಟೋ ಸಹ ಒಂದು ಇದೆ. ಬೆನ್ನಿನ ಮೇಲ್ಭಾಗದಲ್ಲಿ ಕತ್ತಿನ ಕೆಳಗಿನ ಭಾಗದಲ್ಲಿ ಸಿದ್ಧಾಂತಕರ್ತರ ಗೊಂಬೆ ಮೇಲ್ನೋಟಕ್ಕೆ ಕಾಣಿಸುವ ಗ್ರಂಥ ಅಂಟಿಕೊಂಡಾಗ, ಅದನ್ನು ನಾನು ಕೆಳಗಿನ ಭಾಗವನ್ನು ಹಿಡಿದುಕೊಂಡು ಎಳೆದಿದ್ದೇನೆ. ಅದು ಬಿಚ್ಚಿ ಬರಲಿಲ್ಲ. ಮೊದಲು ಸ್ವಲ್ಪ ಎಳೆದವನು ನಂತರ ಸ್ವಲ್ಪ ಜೋರಾಗಿ ಎಳೆದಿದ್ದೇನೆ. ಆದರೂ ಬರಲಿಲ್ಲ. ಗ್ರಂಥ ಅಷ್ಟು ಗಟ್ಟಿಯಾಗಿ ಅಂಟಿಕೊಳ್ಳುವುದೇನೆಂದು ಬಹುಶಃ 50 ಕೇಜೀಗಳ ಭಾರವನ್ನು ಎತ್ತುವ ಬಲವನ್ನು ಉಪಯೋಗಿಸಿ ಅಂದರೆ ನನ್ನ ಕೈಗಳಿಗಿರುವ ಶಕ್ತಿಯನ್ನೆಲ್ಲಾ ಉಪಯೋಗಿಸಿ ಕೆಳಗೆ ಎಳೆದಿದ್ದೇನೆ. ಗೋಡೆಗೆ ಉಡ ಅಂಟಿಕೊಂಡಂತೆ ಅದು ಅಂಟಿಕೊಂಡಿದೆ ಆದರೇ ಅಷ್ಟು ಬಲವನ್ನು ಉಪಯೋಗಿಸಿ ಎಳೆದರೂ ಅದು ಬಿಚ್ಚಿ ಬರಲಿಲ್ಲ. ಮೊದಲ ಸಲ ಅಷ್ಟು ಗಟ್ಟಿಯಾಗಿ ಗ್ರಂಥ ಶರೀರಕ್ಕೆ ಅಂಟಿಕೊಂಡಿರುವುದು ನೋಡಿ ನನಗೇ ಆಶ್ಚರ್ಯವೆನಿಸಿತು. ಮೊದಲೇ ಹೇಳಿದ್ದೇವೆ 'ಗ್ರಂಥಗಳಲ್ಲಿ ಪಾಲಕರು ಪ್ರವೇಶಿಸಿದ್ದಾರೆಂದು, ಅವರ ಬಲದಿಂದ ಅದು ಕೆಳಗೆ ಎಳೆದರೂ (ಕಿತ್ತರೂ) ಬರಲಿಲ್ಲವೆಂದು ತಿಳಿದಿದೆ. ಇನ್ನೊಂದು ವಿಧವಾಗಿ ಗ್ರಂಥವನ್ನು ಶರೀರದಿಂದ ಮೇಲಕ್ಕೆ ತೆಗೆದರೆ ಸುಲಭವಾಗಿ ನಮ್ಮ ಕೈಗೆ ಬರುತ್ತಿದೆ. ಇಡುವಾಗ ಹೇಗೆ ಇಟ್ಟಿದ್ದೇವೋ ಹಾಗೇ ತೆಗೆದರೇ ಯಾವ ಶ್ರಮ ಇಲ್ಲದೆ ಶರೀರದಿಂದ ಬೇರೆಯಾಗಿ ಬರುತ್ತಿದೆ. ಕೆಳಗೆ ಎಳೆದರೇ ಮಾತ್ರ ಕೈ ಬೆರಳುಗಳಿಂದ ಗ್ರಂಥ ಜಾರಿಹೋಗುತ್ತಿದೆ ಆದರೇ ಅದು ಮಾತ್ರ ಕೆಳಗೆ ದಾರದ ಎಳೆಯಷ್ಟು ಕೂಡಾ ಸರಿಯಲಿಲ್ಲ. ಗತದಲ್ಲಿಯೂ ಸಹ ಹಾಗೆ ಕೆಳಗೆ ಎಳೆದವರು ಇದ್ದಾರೆ. ಆಗಲೂ ಸಹ ಎಷ್ಟು ಬಲವನ್ನು ಉಪಯೋಗಿಸಿದರೂ ಸ್ವಲ್ಪವೂ ಸಹ ಇರುವ ಸ್ಥಳದಿಂದ ಕದಲಲಿಲ್ಲವೆಂದಿದ್ದಾರೆ. ಕೆಳಗೆ ಎಳೆದರೇ ಬಾರದ ಗ್ರಂಥ ಹೊರಗೆ ತೆಗೆದರೆ ಸುಲಭವಾಗಿ ಬಿಚ್ಚಿ ಬರುತ್ತಿದೆ.

ಮತ್ತೊಂದು ವಿಚಿತ್ರವೇನೆಂದರೇ! ಕೆಲವರಿಗೆ ಹೊಟ್ಟೆಯ ಮೇಲೆ ಅಂಟಿಕೊಂಡಿರುವ ಗ್ರಂಥ ಶರೀರದಲ್ಲಿನ ನೋವು ಮೇಲಕ್ಕೆ ಸರಿಯುತ್ತಿದ್ದರೇ

ಗ್ರಂಥವೂ ಸಹ ಸರಿದುಹೋದ ಸಂಘಟನೆಗಳು ಇವೆ. ಕೆಳಗಿನಿಂದ ಹೋಗಿ ಕುತ್ತಿಗೆಗೆ ಆದುಕೊಂಡಂತೆ ಕೂಡಾ ಕೆಲವರು ಹೇಳಿದ್ದಾರೆ. ಕೆಲವರಿಗೆ ಶರೀರದಲ್ಲಿ ನೋವು ಪಕ್ಕಕ್ಕೆ ಸರಿದು ಹೋಗುತ್ತಿದ್ದರೇ, ಗ್ರಂಥವೂ ಸಹ ಅದಷ್ಟಕ್ಕದೇ ಸರಿದು ಹೋಗುವುದು ನಡೆಯುತ್ತಿದೆಯೆಂದು ಬಹಳ ಜನ ಹೇಳಿದ್ದಾರೆ. ಮೊಣಕಾಲನೋವು ಇರುವವರು ಮೊಣಕಾಲಿಗೆ ಗ್ರಂಥವನ್ನು ಇಟ್ಟರೇ ಅದು ಹಾಗೆಯೇ ಅಂಟಿಕೊಂಡ ದೃಶ್ಯಗಳನ್ನು ಗ್ರಂಥದಲ್ಲಿರುವ ಫೋಟೋಗಳಲ್ಲಿ ನೋಡಬಹುದು. ಬೆನ್ನಿಗೂ, ಕೈಗಳಿಗೂ, ಹೊಟ್ಟೆಗಳಿಗೂ, ಕತ್ತುಗಳಿಗೂ, ತಲೆಗಳಿಗೂ, ಕೆನ್ನೆಗಳಿಗೂ ಅಂಟಿಕೊಂಡ ಗ್ರಂಥಗಳ ದೃಶ್ಯಗಳು ಕಾಣಿಸುತ್ತಿವೆ. ಮತ್ತೊಂದು ವಿಚಿತ್ರವೇನೆಂದರೇ! ಮುಖದಲ್ಲಿ ಇಟ್ಟುಕೊಂಡಿರುವ **'ದೇವರ ಮುದ್ರೆ'** (ದೇವರ ಚಿಹ್ನೆ) ವೊಂದರ ಅಚ್ಚು ಸಹ ಹಣೆಯ ಭಾಗದಲ್ಲಿ ಅಂಟಿಕೊಂಡಿರುವ ದೃಶ್ಯವೂ ಸಹ ಇದೆ. ಅದನ್ನು ಅಂಟಿಸಿಕೊಂಡ ವ್ಯಕ್ತಿ ಒಬ್ಬ ಕ್ರೈಸ್ತ ಮತಸ್ಥನು ಎಂದು ಫೋಟೋದಲ್ಲೇ ಅರ್ಥವಾಗುತ್ತಿದೆ. ನೀವು ಗ್ರಂಥದಲ್ಲಿ ಮೂರು ಮತದವರಿಗೂ ಗ್ರಂಥಗಳು ಅಂಟಿಕೊಂಡಿರುವ ದೃಶ್ಯವನ್ನು ನೋಡಬಹುದು. ಹಾಗೆ ಕಾಣಿಸುವುದರಿಂದ ದೇವರನ್ನು ಯಾರಾದರೂ ವಿಶ್ವಾಸಿಸಬಹುದೆಂದು, ತನ್ನನ್ನು, ತನ್ನ ಜ್ಞಾನವನ್ನು ವಿಶ್ವಾಸಿಸಿದವನು ಯಾವ ಮತಕ್ಕೆ ಸೇರಿದವನಾದರೂ ದೇವರ ಪಾಲಕರು ಅವನ ಕರ್ಮವನ್ನು ಇಲ್ಲದಂತೆ ಮಾಡುತ್ತಾರೆಂದು ತಿಳಿಯುತ್ತಿದೆ. ಗ್ರಂಥದಲ್ಲಿನ ಫೋಟೋಗಳಲ್ಲಿ ಚಿಕ್ಕ ಮಕ್ಕಳಿಂದ ಹಿಡಿದು ವೃದ್ಧರವರೆಗು ಹಿಂದೂಗಳಿಂದ ಹಿಡಿದು ಕ್ರೈಸ್ತರವರು, ಮುಸ್ಲಿಮ್‌ರು ಸಹ ಕಾಣಿಸುತ್ತಿದ್ದಾರೆ. ಇದನ್ನನುಸರಿಸಿ ವ್ಯಕ್ತಿಗೆ ಭಕ್ತಿ ಭಾವವಿದ್ದರೇ ಸಾಕು ಅಥವಾ ಸ್ವಲ್ಪ ವಿಶ್ವಾಸವಿದ್ದರೂ ಸಾಕು, ಅವರು ಚಿಕ್ಕವಯಸ್ಸಿನವರಾಗಲೀ ದೊಡ್ಡವಯಸ್ಸಿನವರಾಗಲೀ ಹಾಗೆಯೇ ಯಾವ ಕುಲವೂ ಯಾವ ಮತದವರಾದರೂ ಅವರ ಕರ್ಮಗಳನ್ನು ಪಾಲಕರು ದಹಿಸಿ ಅವರ ಬಾಧೆಗಳಿಂದ ವಿಮುಕ್ತಿ ಹೊಂದಿಸಿ ದೇವರು ಕ್ಷಮಾಶೀಲನು, ಕರ್ಮ ನಾಶಮಾಡುವವನೆಂದು ನಿರೂಪಿಸುತ್ತಿದ್ದಾರೆ. ಮುಖ್ಯವಾಗಿ ಗಮನಿಸಬೇಕಾಗಿರುವುದೇನೆಂದರೇ! ನಮ್ಮ ಕೈಯಿಂದ ಬಿಡುಗಡೆಯಾದ, ನಮ್ಮ ಜ್ಞಾನದಿಂದ ತುಂಬಿಕೊಂಡ ಗ್ರಂಥಗಳೆಲ್ಲವೂ

ಹಾಗೆಯೇ ಇವೆಯೆಂದು ಹೇಳುತ್ತಿದ್ದೇವೆ. ನಮ್ಮಿಂದ ಬರೆಯಲ್ಪಟ್ಟ, ನಮ್ಮಿಂದ ಬಿಡುಗಡೆಯಾದ, **ಪ್ರಬೋಧಾಶ್ರಮ**ಕ್ಕೆ ಸಂಬಂಧಿಸಿದ ಗ್ರಂಥಗಳೊಳಗೆ ದೈವ ಪಾಲಕರು ಬಂದು ಸೇರಿಹೋಗುತ್ತಿದ್ದಾರೆಂದು ಹೇಳುತ್ತಿದ್ದೇನೆ.

ನೀವು ಗ್ರಂಥದಲ್ಲಿ 129ನೇ ಪುಟದಿಂದ 144ನೇ ಪುಟದವರೆಗು ಇರುವ ಫೋಟೋಗಳಲ್ಲಿ ಚಿಕ್ಕ ಮಕ್ಕಳು, ಮಧ್ಯವಯಸ್ಸಿನವರು, ವೃದ್ಧರು ಮೂರು ವಿಧಗಳ ವಯಸ್ಸಿರುವವರನ್ನು ನೋಡಬಹುದು. ಹಾಗೆಯೇ ಹಿಂದೂ, ಇಸ್ಲಾಮ್, ಕ್ರೈಸ್ತರನ್ನು ನೋಡಬಹುದು. ಹಾಗೇ ಮೂರು ಮತದವರಿಗೂ ಸಂಬಂಧಿಸಿದ ಗ್ರಂಥಗಳನ್ನು ನೋಡಬಹುದು. ನಾನು ಮೂರು ಮತಗಳ ಜ್ಞಾನವನ್ನು ಏಕವಾಗಿ ಹೇಳುತ್ತಿದ್ದೇನೆ. ಆದ್ದರಿಂದ ಕೆಲವರು ನನ್ನನ್ನು **"ತ್ರಿಮತ ಏಕೈಕ ಗುರುವು"** ಎಂದು ಕರೆಯುತ್ತಿದ್ದಾರೆ. ಕೆಲವರು ಮತಛಾಂದಸವಾದಿಗಳಿಗೆ ನಮ್ಮ ವಿಧಾನ ಎಂದರೇ ಮೂರು ದೈವ ಗ್ರಂಥಗಳ ಜ್ಞಾನವನ್ನು ಹೇಳುವುದು ಸರಿಹೋಗದೇ ಹೋಗಬಹುದು. ಆದರೂ ನಾನು ಮಾಡುವುದು ಒಳ್ಳೆಯ ಕೆಲಸವೆಂದೇ ಅಂದುಕೊಳ್ಳುತ್ತಿದ್ದೇನೆ. ನಾನು ಅಂದುಕೊಳ್ಳುವುದೇ ಅಲ್ಲ ನೀವು ನನ್ನ ಗ್ರಂಥಗಳನ್ನು ಓದಿರಿ, ಆಗ ನನ್ನ ಗ್ರಂಥಗಳಲ್ಲಿರುವ ರುಚಿ ಏನೋ ತಿಳಿಯುತ್ತದೆ. ಗ್ರಂಥಗಳ ಬಗ್ಗೆ ಪ್ರತ್ಯಕ್ಷವಾಗಿ ದೇವರ ಘನತೆ ಕಾಣಿಸುತ್ತಿದ್ದರೂ, ಮತದ ಹಿಂದೆಬಿದ್ದು ನನ್ನನ್ನು ದೂಷಿಸುವವರಿಗೆ ಪಾಪ ಕ್ಷಮಾಪಣೆ ಇರುವುದಿಲ್ಲ. ನಾನು ಏನೂ ಅಂದುಕೊಳ್ಳದಿದ್ದರೂ ಪಾಲಕರು ಶಿಕ್ಷಿಸುತ್ತಾರೆಂದು ನನ್ನ ಅನುಭವದಿಂದ ಹೇಳುತ್ತಿದ್ದೇನೆ. ಬಹಳ ಜನ ಶಿಕ್ಷೆಗೆ ಗುರಿಯಾದವರನ್ನು ನೋಡಿದ್ದೇನೆ ಆದ್ದರಿಂದ ಹೇಳಿದ್ದೇನೆ.

ಇಲ್ಲಿಗೆ ಈ ಗ್ರಂಥದೊಂದಿಗೆ ನಾನು ಬರೆದಿರುವವು ಎಂಬತ್ನಾಲ್ಕು (84) ಗ್ರಂಥಗಳು. ನಂತರ ನಮ್ಮ ಹತ್ತಿರ ಪ್ರಚುರಣೆ ನಡೆದ, ನಮ್ಮ ಭಕ್ತರು ನಮ್ಮ ಜ್ಞಾನವನ್ನು ಅನುಸರಿಸಿ ಬರೆದ ಗ್ರಂಥಗಳು ಸಹ ಕೆಲವು ಇವೆ. ಆ ಗ್ರಂಥಗಳಲ್ಲಿ ಕೆಲವನ್ನು ನಾನು ನೋಡುವುದು, ಅವುಗಳನ್ನು ನನ್ನ ಕೈಯಿಂದ ಬಿಡುಗಡೆ ಮಾಡುವುದು ನಡೆದಿದೆ. ಹಾಗೇ ನನ್ನ ಬಳಿಯಿಂದ ಬಂದ

ಗ್ರಂಥಗಳಿಗೂ ಸಹ ದೈವ ಶಕ್ತಿ ಹಬ್ಬಿದೆ. ಪಾಲಕರು ಅದರಲ್ಲಿ ಸೇರಿದ್ದಾರೆಂದು ಹೇಳುತ್ತಿದ್ದೇನೆ. ಅಂತಹವು ಐದಾರು ಗ್ರಂಥಗಳು ಇವೆ. ನನ್ನ ಗ್ರಂಥಗಳು ಇಲ್ಲಿಗೆ 84 ಆದಾಗ, ಮುಂಬರುವ ಕಾಲದಲ್ಲಿ ನೂರು ಗ್ರಂಥಗಳು ಮೇಲ್ಪಟ್ಟು ಬರಬೇಕೆಂದು ದೇವರ ಸಂಕಲ್ಪವಿದೆ. ಮುಂಬರುವ ಗ್ರಂಥಗಳಲ್ಲಿ ಈಗಿನಿಂದ **ಪ್ರತ್ಯೇಕವಾದ ಪಾಲಕರು** ಬರಬಹುದೆಂದು ಅಂದುಕೊಳ್ಳುತ್ತಿದ್ದೇನೆ. ನಾವು ಹೇಳುವ ವಿಷಯಗಳನ್ನು ನೋಡಿ ಕೆಲವರು ಅಸೂಯೆ ಪಟ್ಟು ಹೇಳನವಾಗಿ ಮಾತನಾಡಬಹುದು. ನಾನು ಹೇಳುವುದೆಲ್ಲಾ ಪ್ರತ್ಯೇಕವಾಗಿರುವುದರಿಂದ ಕೆಲವರು ಭಕ್ತಿಯಿಂದ ಕೇಳಬಹುದು, ಕೆಲವರು ಅಸೂಯೆಯಿಂದ ಮಾತನಾಡುವುದು ಸಹಜವೇ. ಅರ್ಥವಾಗದಿದ್ದರೆ ಇನ್ನೊಂದು ಬಾರಿ ಓದಿ ತಿಳಿದುಕೊಳ್ಳಬಹುದು ಇಲ್ಲದೇ ಹೋದರೇ ಸುಮ್ಮನಿರುವುದು ಉತ್ತಮವಾದ ಕೆಲಸವಾಗುತ್ತದೆ. ನಾವೇಕೆ ಸುಮ್ಮನಿರುತ್ತೇವೆಂದು ನನ್ನನ್ನು ದೂಷಿಸಿದರೇ ಆ ಸಮಯದಲ್ಲಿ, ಆ ಪ್ರಾಂತದಲ್ಲಿ ಕಾಣಿಸದ ಗ್ರಹಗಳಾಗಲೀ, ಭೂತಗಳಾಗಲೀ ಅಲ್ಲಿದ್ದು ಅವರು ಕೇಳಿಸಿಕೊಂಡರೇ ದೂಷಣೆ ಮಾಡಿದವರನ್ನು ಸುಮ್ಮನೆ ಬಿಡುವುದಿಲ್ಲ. ಇಲ್ಲಿಗೆ ಬಹಳ ಜನ ರೋಗಗಳ ಪಾಲಾದವರು ಇದ್ದಾರೆ. ಹಾಗೆಯೇ ಕಾರಣವಿಲ್ಲದಂತೆ ಮರಣಿಸಿ ದವರು ಇದ್ದಾರೆ. ನಂತರ ಡಾಕ್ಟರ್‌ಗಳು ಹಾರ್ಟ್ ಫೇಲ್ ಎನ್ನುವುದು ಸಹಜ. ಯಾವ ಕಾರಣ ಇಲ್ಲದಿದ್ದರೇ ಹೇಳುವುದು ಅದೇ. ಅಷ್ಟು ಕೆಲಸ ಏಕೆ ಕೇಳಿ, ಸುಮ್ಮನೆಯಾದರೂ ಇರು ಅಥವಾ ತಿಳಿದುಕೊಳ್ಳುವುದಕ್ಕಾದರೂ ಪ್ರಯತ್ನಿಸು. ಯಾವುದೂ ಅಲ್ಲದೆ ನಿಷ್ಕಾರಣವಾಗಿ ಮಾತನಾಡುವುದರಿಂದ ಕಾರಣವಿಲ್ಲದ ಅವಸ್ಥೆಗಳು, ಕಾರಣವಿಲ್ಲದ ಮರಣಗಳು ನಡೆದಿರುವವುಗಳನ್ನು ನಾವು ನೋಡಿದ್ದೇವೆ. ನಾವು ಬರೆದ **"ದೆವ್ವಗಳ-ಭೂತಗಳ ಯಥಾರ್ಥ ಸಂಘಟನೆಗಳು"** ಎನ್ನುವ ಗ್ರಂಥದಲ್ಲಿಯೂ, **"ಶ್ರೀ ಕೃಷ್ಣನು ದೇವರಾ! ಭಗವಂತನಾ!!"** ಎನ್ನುವ ಗ್ರಂಥದಲ್ಲಿಯೂ ಇಂತಹ ವಿಷಯಗಳು ಬರೆಯಲಾಗಿವೆ. ಆದ್ದರಿಂದ ನಿಮ್ಮ ಒಳಿತಿಗಾಗಿ ನಾವು ಹೇಳುವುದು ಏನೆಂದರೆ! ನಾವು ಇಲ್ಲಿಯವರೆಗು ಹೇಳಿದ ವಿಷಯಗಳು ನಂಬಲು ಆಗದಿರುವವಾಗಿ ಇವೆಯೆಂದು ನಾನೇ ಸ್ವತಃವಾಗಿ

ಹೇಳುತ್ತಿದ್ದೇನೆ ಅಲ್ಲವೇ! ನನ್ನ ಮಾತನ್ನನುಸರಿಸಿ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿರಿ. ಇಲ್ಲದಿದ್ದರೆ ಏನು ಅಂಟದಂತೆ ಸುಮ್ಮನೆ ಇದ್ದುಹೋಗಿರಿ.

**ಪ್ರಶ್ನೆ :– ನೀವು "ನಾವು ಬರೆಯುವ ಗ್ರಂಥಗಳಲ್ಲಿ ಪ್ರತ್ಯೇಕವಾದ ಪಾಲಕರು ಬರುತ್ತಾರೆ" ಎಂದು ಹೇಳಿದ್ದೀರ. ನಿಮ್ಮ ಗ್ರಂಥಗಳಲ್ಲಿ ಪಾಲಕರು ಇದ್ದಾರೆಂದು ಹೇಳುವುದೇ ದೊಡ್ಡ ಪ್ರತ್ಯೇಕತೆ. ಪ್ರಪಂಚದಲ್ಲಿ ಎಲ್ಲಿಲ್ಲದ ವಿಧಾನವನ್ನು ಇಲ್ಲಿವರೆಗು ಹೇಳಿದ್ದೀರ. ಈಗಲೇನೊ ಮುಂಬರುವಂತಹ ಗ್ರಂಥಗಳಲ್ಲಿ ಪ್ರತ್ಯೇಕವಾದ ಪಾಲಕರು ಬರುತ್ತಾರೆಂದು ಹೇಳುವುದು ನಮಗೆ ಅರ್ಥವಾಗದಂತಹ ವಿಷಯವಾಗಿದೆ. ಈ ವಿಷಯವಾಗಿ ನಮಗೆ ಅರ್ಥವಾಗುವಂತೆ ವಿವರವಾಗಿ ಹೇಳಬೇಕೆಂದು ಕೋರುತ್ತಿದ್ದೇವೆ?**

**ಉತ್ತರ :–** ನಾವು ಕರ್ಮಗಳ ನಿರ್ಮೂಲನೆ ಮತ್ತು ಪಾಲನಾ ಪದ್ಧತಿಯನ್ನು ಸ್ಥೂಲವಾಗಿ ತಿಳಿಸಬೇಕೆಂದು ದೇವರನ್ನು ಕೋರಿರುವುದು ಧರ್ಮಸಮ್ಮತವಾದ ವಿಷಯ. ಆದ್ದರಿಂದ ಶರೀರದ ಹೊರಗೆ ದೇವರ ಪಾಲಕರು ಕರ್ಮವನ್ನು ಹೇಗೆ ಪಾಲಿಸುತ್ತಿರುವುದು ಸೂಕ್ಷ್ಮವಾಗಿ ಅರ್ಥವಾದರೂ, ಹೇಗೆ ನಿರ್ಮೂಲಿಸುತ್ತಿರುವುದು ಸ್ಥೂಲವಾಗಿ ತಿಳಿಯುವಂತೆ ಮಾಡಿದ್ದಾನೆ. ಅದು ಕೂಡಾ ಎಲ್ಲಿಯೊ ಅಲ್ಲದೇ ನಮ್ಮ ಗ್ರಂಥಗಳ ಮೂಲಕವೇ ನಡೆಯುತ್ತಿದೆಯೆಂದು ಹೇಳಿದ್ದೇವೆ. ಗ್ರಂಥಗಳು ಶರೀರಕ್ಕೆ ಅಂಟಿಕೊಳ್ಳುವುದು ಸ್ಥೂಲವಾಗಿ ಕಾಣಿಸಿದರೂ ಅದು ಹೇಗೆ ನಡೆಯುತ್ತಿದೆಯೊ ನಮಗೆ ಸ್ವಲ್ಪಮಟ್ಟಿಗೆ ಅರ್ಥವಾಗಿದೆ. ಅದನ್ನು ವಿವರವಾಗಿ ಹೇಳಿದರೆ ಹೀಗೆ ಇದೆ. ದೇವರ ಪಾಲಕರು ಎರಡು ವಿಧಗಳಾಗಿ ಇದ್ದಾರೆ. ಅವರನ್ನೇ ಒಂದು ಭೂತಗಳು, ಎರಡು ಗ್ರಹಗಳೆಂದು ಹೇಳಬಹುದು. ಭೂತಗಳು, ಗ್ರಹಗಳು ಎರಡು ಪಾಲಕರೇ ಆದರೂ, ಗ್ರಹಗಳಿಗಿಂತ ಭೂತಗಳು ಸ್ವಲ್ಪ ಪ್ರತ್ಯೇಕತೆ ಹೊಂದಿವೆ. ಗ್ರಹಗಳಿಗಿರುವ ಶಕ್ತಿಗಿಂತ ಭೂತಗಳ ಶಕ್ತಿ ಮತ್ತಷ್ಟು ಹೆಚ್ಚಾಗಿರುತ್ತದೆ. ಗ್ರಹಗಳೆಂದರೇ **ಸೂರ್ಯನು, ಚಂದ್ರನು, ಕುಜನು, ಬುಧ, ಗುರು, ಶುಕ್ರ, ಶನಿ** ಮೊದಲಾದ ಗ್ರಹಗಳ ವಾರಸತ್ವ ಹೊಂದಿವೆ. ಗ್ರಹಗಳಿಗೆ ಏಳು ಗ್ರಹಗಳು ವಾರಸತ್ವ ಗ್ರಹಗಳು. ಹಾಗೆಯೇ ಭೂತಗಳೆಂದರೇ **ಆಕಾಶ,**

**ಗಾಳಿ, ಅಗ್ನಿ, ನೀರು, ಭೂಮಿ** ಎನ್ನುವ ಐದು ಮಹಾಭೂತಗಳು ವಾರಸತ್ವ ಹೊಂದಿವೆ. ಪ್ರಕೃತಿಯಲ್ಲಿನ ಭಾಗಗಳಾದ ಐದು ಶಕ್ತಿಗಳಿಗೆ ಸಂತತಿಯಂತೆ ವಾರಸತ್ವ ಹೊಂದಿವೆ. ಭೂತಗಳು, ಉಪಭೂತಗಳು ಇವೆ. ಐದು ಮಹಾಭೂತಗಳ ಸಂಬಂಧ ಭೂತಗಳ ಜಾತಿ ಕೆಲವು ನೂರಾರೂ ಕೋಟಿಗಳು ಇವೆ. ಹಾಗೇ ಏಳು ಗ್ರಹಗಳ ಸಂಬಂಧ ಗ್ರಹಗಳ ಜಾತಿ ಭೂತಗಳ ಜಾತಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ನೂರಾರು ಕೋಟಿಗಳು ಇವೆ. ಅಷ್ಟೇಅಲ್ಲದೆ ಸಾವಿರಕ್ಕೆ ಇನ್ನೂರರ ಪ್ರಕಾರ ಗ್ರಹಗಳ ಪಾಲಕರಲ್ಲಿ ಕೆಲವು ಕೋಟಿಜನ ಯಾರಿಗೂ ತಿಳಿಯದ, ಆಕಾರಗಳಿಲ್ಲದ ಉಪಗ್ರಹಗಳು ಕೂಡಾ ಇವೆ. ಇದೆಲ್ಲವೂ ದೇವರ ಪಾಲಕರ ವಿವರವಾಗಿರುವಾಗ, ಎಲ್ಲವೇಳೆಯಲ್ಲಿ ಮನುಷ್ಯರ ಶರೀರದಲ್ಲಿಯೂ, ಶರೀರದ ಹೊರಗೆ  ಪಾಲನೆ ಸಾಗುತ್ತಲೇ ಇದೆ. ಶರೀರದೊಳಗೆ ಆತ್ಮವೇ ಒಂದುಕಡೆ ದೇವರಾಗಿದ್ದು, ಮತ್ತೊಂದು ಕಡೆ ಕಾರ್ಯಕರ್ತನಾಗಿ ಇದೆ.

ಶರೀರದ ಹೊರಗೆ ದೇವರು ಪರಮಾತ್ಮನಾದರೂ ತಾನು ಸುಮ್ಮನಿದ್ದು ಹೋಗಿ, ತನ್ನ ಪ್ರಕೃತಿಗೆ ಒಪ್ಪಿಸಿ ತಾನು ಏನು ಮಾಡದೆ ಸುಮ್ಮನೆ ಕುಳಿತುಕೊಂಡಿದ್ದಾನೆ. ಪ್ರಕೃತಿ ಐದುಭಾಗಗಳಾಗಿದ್ದು ತನ್ನ ವಾರಸತ್ವ ಪಾಲಕರನ್ನು ನೇಮಿಸಿಕೊಂಡಾಗ, ಏಳು ಗ್ರಹಗಳ ವಾರಸತ್ವ ಗ್ರಹಗಳನ್ನು ಕೂಡ ಪಾಲನೆ ಸಾಗಿಸುವುದು ಮಾಡುತ್ತಿದೆ. ಪ್ರಕೃತಿ ಪರಮಾತ್ಮ ಮಾಡಬೇಕಾದ ಕಾರ್ಯಗಳನ್ನು ಮಾಡುತ್ತಾ ಪರಮಾತ್ಮಗೆ ಕೆಲಸವಿಲ್ಲದಂತೆ ಮಾಡಿದೆ. ಪ್ರಕೃತಿಗೆ ಸಂಬಂಧಿಸಿರುವವು ಭೂತಗಳ ಜಾತಿ ಪಾಲಕರು, ಭೂತಗಳಿಂದ ತಯಾರಾಗಿರುವವು ಗ್ರಹಗಳು, ಇದನ್ನನುಸರಿಸಿ ಗ್ರಹಗಳಿಗಿಂತ ಭೂತಗಳು ಸ್ವಲ್ಪ ಪ್ರತ್ಯೇಕತೆಯನ್ನು ಹೊಂದಿವೆ ಯೆಂದು ಹೇಳಿದ್ದೇವೆ. ಗ್ರಹಗಳು ಪ್ರಕೃತಿಯೊಂದರ ಅಜ್ಞೆಯಿಂದಲೇ ಕೆಲಸ ಮಾಡುತ್ತಿವೆ. ಅವರಿಗೆ ಎಂದರೇ ಗ್ರಹಗಳಿಗೆ 'ಬಾಧಿಸುವ ಅಧಿಕಾರ' ಮಾತ್ರವೇ ಇದೆ ಆದರೆ ಮನುಷ್ಯರನ್ನು 'ಸಾಯಿಸುವ ಅಧಿಕಾರ' ಇಲ್ಲ. ಒಂದುಸಲ ಮನುಷ್ಯನನ್ನು ಹಿಡಿದುಕೊಂಡರೆ ಐದು ತಿಂಗಳವರೆಗು ಬಾಧಿಸುವ ಅಧಿಕಾರ ಇದೆಯೆಂದು, ಚೇಳಿನ ವಿಷದಹಾಗೆ ಬಾಧಿಸುವ ಅಧಿಕಾರ ಇದೆಯೆಂದು

ಬೈಬಲ್ ಪ್ರಕಟಣೆ ಗ್ರಂಥದಲ್ಲಿ ಕೂಡಾ ಹೇಳಿದಂತೆ ಇದೆ. ಮನುಷ್ಯನನ್ನು ಬಾಧಿಸುವ ಯಾವ ಬಾಧೆಯಾದರೂ ಪ್ರಕೃತಿ ಅನುಮತಿಯಿಲ್ಲದೆ ಗ್ರಹಗಳು ಮನುಷ್ಯನನ್ನು ಹಿಂಸಿಸುವುದಿಲ್ಲ. ಇಲ್ಲಿಯವರೆಗು ಸುಮಾರು 80 ಗ್ರಂಥಗಳವರೆಗು ನಮ್ಮ ಗ್ರಂಥಗಳಲ್ಲಿ ಪಾಲಕರಾದ ಗ್ರಹಗಳು ಮಾತ್ರವೇ ಇದ್ದಾರೆ. ನಂತರ 80 ಗ್ರಂಥಗಳಿಂದ ಈಗ ಬರುವಂತಹ ಗ್ರಂಥಗಳಲ್ಲಿ ಕೂಡಾ ಗ್ರಹಗಳಲ್ಲದೆ ಪ್ರತ್ಯೇಕಿಸಿ ಭೂತಗಳು ಪ್ರವೇಶಿಸುತ್ತಿವೆಯೆಂದು ಹೇಳುತ್ತಿದ್ದೇವೆ. ಭೂತಗಳು ಸ್ವತಃವಾಗಿ ಪ್ರಕೃತಿ ವಾರಸತ್ವವೇ ಆಗಿರುವುದರಿಂದ ಪಂಚಭೂತಗಳಿಗಿರುವ ಅಧಿಕಾರಗಳು ಕೆಲವು ಇರುತ್ತವೆ. ಆದ್ದರಿಂದ ಪ್ರಕೃತಿ ಅಜ್ಞೆಗಾಗಿ ಎದುರು ನೋಡದೆ ಅಗತ್ಯ ಬಂದಾಗ 'ಸ್ವತಃ ನಿರ್ಣಯ' ತೆಗೆದುಕೊಳ್ಳುವ ಅಧಿಕಾರ ಹೊಂದಿರುವವಾಗಿರುತ್ತವೆ. ಮನುಷ್ಯರ ಕರ್ಮವನ್ನನುಸರಿಸಿ ಗ್ರಹಗಳಂತೆ ಅಲ್ಲದೆ, ಮನುಷ್ಯರನ್ನು ಸಾಯಿಸುವ ಅಧಿಕಾರವೂ ಕೂಡ ಭೂತಗಳು ಹೊಂದಿರುವವಾಗಿವೆ. ಮನುಷ್ಯರನ್ನು ಹಿಂಸಿಸುವುದು ಹೊರತು, ಸಾಯಿಸುವ ಅಧಿಕಾರ ಗ್ರಹಗಳಿಗೆ ಇಲ್ಲ. ಭೂತಗಳು ಹಾಗಲ್ಲದೆ ಅಗತ್ಯವನ್ನನುಸರಿಸಿ ನಿರ್ಣಯವನ್ನು ತೆಗೆದುಕೊಳ್ಳುವುದು, ಅಗತ್ಯವನ್ನು ಅನುಸರಿಸಿ ಸಾಯಿಸುವ ಅಧಿಕಾರ ಹೊಂದಿರುವವಾಗಿವೆ. ಇದಕ್ಕು ಮೊದಲು ನಮಗೆ ವಿರುದ್ಧವಾಗಿ ಮಾತನಾಡಿದವರನ್ನು ಎರಡನೆ ದಿನವೇ ಭೂತಗಳು ಸಾಯಿಸಿದ ವಿಷಯ ಕೆಲವರಿಗೆ ಮಾತ್ರ ತಿಳಿದಿದೆ. ಆ ದಿನ ದೂಷಿಸಿದವನ ಮರಣಕ್ಕೆ ಕಾರಣ ಭೂತಗಳೇ ಎಂದು ಬಹಳ ಜನರಿಗೆ ಗೊತ್ತಿಲ್ಲ. ಈಗ ಈ ಗ್ರಂಥದೊಳಗೆ ಕೂಡಾ ಭೂತಗಳೇ ಪ್ರವೇಶಿಸುತ್ತವೆ.

ಭೂತಗಳು, ಗ್ರಹಗಳು ದೇವರ ಪಾಲನೆಯನ್ನು ಸಮನ್ವಯವಾಗಿ ನಿರ್ವಹಿಸುತ್ತಿವೆ. ಭೂತಗಳಿಗು, ಗ್ರಹಗಳಿಗು, ಪ್ರಕೃತಿ ಹಿಂದಿರುವ ದೇವರು ತಿಳಿಯುವುದಿಲ್ಲ. ಆದರೂ ಪ್ರಕೃತಿ ಎಷ್ಟಾಗಿ ದೇವರ ಮೇಲೆ ಭಕ್ತಿಹೊಂದಿದೆಯೋ ಅಷ್ಟಾಗಿಯೇ ಭೂತಗಳು, ಗ್ರಹಗಳು, ಭಕ್ತಿಹೊಂದಿ ದೇವರ ಜ್ಞಾನದಲ್ಲಿ ಶ್ರದ್ಧೆಹೊಂದಿ ಜ್ಞಾನವನ್ನು ಸಂಪೂರ್ಣವಾಗಿ ಹೊಂದಿವೆ. ಇಲ್ಲಿಗೆ 38 ವರ್ಷಗಳ ಸಮಯದಲ್ಲಿ 'ದೇವರ ಚಿಹ್ನೆ'ಯನ್ನು ಗುರುತಿಸಿ ಅದರ ಆಕಾರವನ್ನು ತಯಾರು ಮಾಡಿ

ತೋರಿಸಿದನಂತರ ಮನುಷ್ಯರಿಗಿಂತ ಮೊದಲು ತಮ್ಮ ಹಣೆಯಭಾಗದಲ್ಲಿ 'ದೇವರ ಚಿಹ್ನೆ'ಯನ್ನು ಇಲ್ಲವೇ 'ದೇವರ ಮುದ್ರೆ'ಯನ್ನು ಧರಿಸಿದವರು ಭೂತಗಳು ಮತ್ತು ಗ್ರಹಗಳು ಅಂದಿನಿಂದ ನಿತ್ಯವೂ ದೇವರ ಚಿಹ್ನೆಯೊಂದರ ಅರ್ಥ, ದೇವರ ಮುದ್ರೆಯೊಂದರ ಅರ್ಥ ಎರಡು ವಿಧಗಳ ಅರ್ಥಗಳು ತಿಳಿದು ಧರಿಸುತ್ತಿದ್ದಾರೆ. ಭೂಮಿಮೇಲೆ ಮನುಷ್ಯರಿಗಿಂತ ದೊಡ್ಡ ಜ್ಞಾನಿಗಳಾಗಿ ಇದ್ದಾರೆ. ಭೂಮಿಮೇಲೆ ಮನುಷ್ಯರಾಗಿರುವ ಸ್ವಾಮೀಜಿಗಳು, ಮತಹಿರಿಯರು ಪಂಡಿತರು ಎನ್ನುವವರಲ್ಲಿ ಎಷ್ಟರಮಟ್ಟಿಗೆ ನಿಜವಾದ ಜ್ಞಾನವಿದೆಯೋ ಗ್ರಹಿಸಿ ಅವರ ಜ್ಞಾನ ಸಾಮರ್ಥ್ಯ ಎಷ್ಟೋ ಖಚಿತವಾಗಿ ಅಳತೆ ಹಾಕುವವರು ಪಾಲಕರು. ಹೊರಗಿನ ಮನುಷ್ಯರಲ್ಲಿ ಎಷ್ಟೋ ದೊಡ್ಡ ಜ್ಞಾನಿಯೆಂದು ಹೆಸರಿದ್ದರೂ, ಆತನ ಹತ್ತಿರ ಸರಿಯಾದ ಜ್ಞಾನ ಇಲ್ಲದಿದ್ದರೆ ಅವನನ್ನು ಯಾವಮಾತ್ರ ಗೌರವಿಸುವುದಿಲ್ಲ. ಅವನನ್ನು ದೊಡ್ಡದಾಗಿ ನೋಡುವುದಿಲ್ಲ. ಅವನ ಕರ್ಮ ಪ್ರಕಾರ ಅನುಭವಿಸುವಂತೆ ಮಾಡುತ್ತಾರೆ.

**ಪ್ರಶ್ನೆ :– "ಪಾಲಕರಾದ ಭೂತಗಳು ಒಂದೊಂದುಸಲ ಪ್ರಕೃತಿ ಅಜ್ಞೆಕೊಡದಮುನ್ನವೇ ಸ್ವಯಂ ನಿರ್ಣಯ ತೆಗೆದುಕೊಳ್ಳುತ್ತಾರೆ" ಎಂದು ಹೇಳಿದ್ದೀರ. ಅಂತಹ ನಿರ್ಣಯಗಳು ಎಲ್ಲಿಯಾದರೂ ತೆಗೆದುಕೊಂಡಂತೆ ನಿಮಗೆ ಹೇಗೆ ತಿಳಿದಿದೆ? ಎಲ್ಲಿ ಅಂತಹ ನಿರ್ಣಯಗಳು ತೆಗೆದುಕೊಂಡಿದ್ದಾರೋ ಸ್ವಲ್ಪ ವಿವರವಾಗಿ ಹೇಳಿರಿ?**

**ಉತ್ತರ :–** ನನಗೆ ಹೇಗೆ ತಿಳಿದಿದೆಯೊ ನಿನಗೆ ಹೇಳಿದರೂ ಪ್ರಯೋಜನೆಯಿಲ್ಲ. ಒಂದುವೇಳೆ ಹೇಳಿದರೂ ನಿನಗೆ ಅರ್ಥವಾಗುವುದಿಲ್ಲ. ನಿಮಗೆ ಅರ್ಥವಾಗಬೇಕೆಂದರೆ ಮೊದಲು **ಭೂತಗಳೆಂದರೇ ಏನು? ಗ್ರಹಗಳೆಂದರೆ ಏನು?** ಎಂದು ಮೊದಲು ತಿಳಿದಿರಬೇಕು. ಭೂತಗಳೆಂದರೇ ದೆವ್ವಗಳಲ್ಲವೇ! ಎಂದು ಕೆಲವರು ನನ್ನನ್ನು ಕೇಳುತ್ತಿದ್ದಾರೆ. ಅವರಿಗೆ ಹಾಗೇ ಅರ್ಥವಾಗುತ್ತದೆ. ಅಂತಹವರಿಗೆ "ಅಯ್ಯಾ! ಭೂತಗಳೆಂದರೇ ಅದು ಪ್ರತ್ಯೇಕವಾದ ಜಾತಿ ಎಂದುಕೊ. ದೆವ್ವಳಿಗೆ, ಭೂತಗಳಿಗೆ ಯಾವ ಸಂಬಂಧವಿಲ್ಲ" ಎಂದು ನಾನು ಹೇಳಿದರೆ ಮುಗಿಯದ ಮುನ್ನವೇ "ನೀವು **"ದೆವ್ವಗಳು, ಭೂತಗಳು"** ಎನ್ನುವ ಗ್ರಂಥವನ್ನು ಬರೆದಿದ್ದೀರಲ್ಲ!

ಆಗ ಎರಡೂ ಒಂದೇ ಎನ್ನುವ ಅರ್ಥವಲ್ಲವೆ!" ಎಂದು ಹೇಳುತ್ತಿದ್ದಾರೆ. ನಾನು ಅಲ್ಲಿ ಬರೆದಿರುವುದು ದೆವ್ವಗಳು ಬೇರೆ, ಭೂತಗಳು ಬೇರೆಯೆಂದು, ತಿಳಿಸುವುದಕ್ಕೆ ಹಾಗೆ ಬೇರೆಬೇರೆಯಾಗಿ 'ದೆವ್ವಗಳು, ಭೂತಗಳು' ಎಂದು ಬರೆದಂತೆ ಹೇಳಿದರೆ "ದೆವ್ವಗಳೆಂದರೂ, ಭೂತಗಳೆಂದರೂ ಎರಡು ಒಂದೇಯೆಂದು ನಮ್ಮ ಹಿರಿಯರು ಹೇಳಿದ್ದಾರೆ" ಎಂದು ಅನ್ನುತ್ತಿದ್ದಾರೆ. ಈ ವಿಷಯ ಅವರಿಗಾಗಲಿ, ಅವರ ಹಿರಿಯರಿಗಾಗಲಿ ತಿಳಿದಿಲ್ಲವೆನ್ನುವ ವಿಷಯ ಅವರಿಗೇ ತಿಳಿದಿಲ್ಲ.

ಗ್ರಹಗಳಿಗೆ ಮನುಷ್ಯರನ್ನು ಹಿಂಸಿಸುವ ಅಧಿಕಾರ ಕೊಡಲಾಗಿದೆ ಹೊರತು ಸಾಯಿಸುವ ಅಧಿಕಾರವಿಲ್ಲ. ಆದರೆ ಹೊರಗಿನ ಪ್ರಪಂಚದಲ್ಲಿ ಕೆಲವು ರಸ್ತೆ ಅಪಘಾತದಲ್ಲಿ ಕೆಲವು ಜನ ಮರಣಿಸುವುದು ನಡೆಯುತ್ತಿದೆ. ಆಗ ಅವರನ್ನು ಯಾರು ಸಾಯಿಸಿದ್ದಾರೆ? ಎಂದು ಆಲೋಚಿಸಿದರೆ ಗ್ರಹಗಳು ಮಾತ್ರ ಅಲ್ಲವೆಂದು ಹೇಳಬಹುದು. ಆಗ ಅಲ್ಲಿ ಸಾಯಿಸಿರುವುದು ಭೂತಗಳೇ ಎಂದು ಸ್ಪಷ್ಟವಾಗಿ ತಿಳಿಯುತ್ತಿದೆ. ಭೂತಗಳಿಗೆ ಆಜ್ಞ ಕೊಡದಿದ್ದರೂ ಅವು ಹಾಗೆ ಮಾಡುತ್ತಿವೆಯೆಂದು ಹೇಳಿದ್ದೇವೆ. ಏಕೆ ಹಾಗೆ ಮಾಡುತ್ತಿವೆ ಎಂದರೇ! ಭೂತಗಳು ಪ್ರಕೃತಿ ಸಂಬಂಧವಾದವೇ ಆಗುತ್ತವೆ. ಪ್ರಕೃತಿಯಲ್ಲಿ ಇರುವ ನಿರ್ಣಯವನ್ನು ಪ್ರಕೃತಿ ತಮ್ಮಗೆ ತಿಳಿಯದೇ ಗ್ರಹಿಸಿಕೊಳ್ಳುವ ಸಮಾರ್ಥ್ಯ ಹೊಂದಿವೆ. ಪ್ರಕೃತಿಯೇ ಭೂತಗಳಾಗಿ ವಿಭಜಿಸಲ್ಪಟ್ಟು ಭೂತಗಳ ರೂಪದಲ್ಲಿ ಇರುವುದರಿಂದ ಪ್ರಕೃತಿಯಿಂದ ಪ್ರತ್ಯೇಕಿಸಿ ಆಜ್ಞೆ ಅವಶ್ಯಕತೆ ಇಲ್ಲದೇ ಹೇಳುವಂತಹ ನಿರ್ಣಯಕ್ಕೆ ಸರಿಯಾಗಿ ಸರಿಹೋಗುವ ನಿರ್ಣಯವನ್ನೇ ಭೂತಗಳು ತೆಗೆದುಕೊಳ್ಳುವುದು ನಡೆಯುತ್ತಿದೆ. ಎಲ್ಲಾ ವೇಳೆಯಲ್ಲಿ ಹಾಗೆ ನಡೆಯಲಿಲ್ಲ. ಕೆಲವು ಸಂದರ್ಭಗಳಲ್ಲಿ ಮಾತ್ರ ಹಾಗೆ ಮಾಡುತ್ತಿದ್ದಾರೆ. ಕೇವಲ ಅಜ್ಞಾನಿಗಳ ಬಳಿಮಾತ್ರ ಭೂತಗಳು ಹಾಗೆ ಪ್ರವರ್ತಿಸುತ್ತಿವೆ. ಜ್ಞಾನಿಗಳ ಬಳಿ ಹಾಗೇ ಅಜ್ಞಾನಿಗಳ ಬಳಿ ಭೂತಗಳ ಪ್ರವರ್ತನೆ ಬೇರೆಬೇರೆಯಾಗಿ ಇರುತ್ತವೆ. ಜ್ಞಾನಿಗಳ ವಿಷಯದಲ್ಲಿ ಭೂತಗಳು ಸ್ವಯಂ ನಿರ್ಣಯವನ್ನು ತೆಗೆದುಕೊಳ್ಳುವುದಿಲ್ಲ. ಜ್ಞಾನಿಗಳ ವಿಷಯದಲ್ಲಿ ಪ್ರಕೃತಿ ಹೇಗೆ

ನಿರ್ಣಯಿಸಿದರೆ ಹಾಗೆ ಮಾಡುತ್ತವೆ. ಅಜ್ಞಾನಿಗಳ ವಿಷಯದಲ್ಲಿ ಭೂತಗಳು ಪ್ರಕೃತಿ ನಿರ್ಣಯದವರೆಗು ಕಾದುಕೊಂಡಿರುತ್ತವೆನ್ನುವ ನಂಬಿಕೆಯಿಲ್ಲ. ಅಲ್ಲಿ ಮಾತ್ರ ಭೂತಗಳ ಸ್ವಯಂ ನಿರ್ಣಯಗಳು ನಡೆಯುತ್ತಿವೆ.

ಭೂಮಿಮೇಲೆ ದೇವರ ಜ್ಞಾನವನ್ನು ತಿಳಿದು ಮೂರು ಗ್ರಂಥಗಳ ಪ್ರಕಾರ ದೈವ ಆಚರಣೆ ಹೊಂದಿರುವವನನ್ನು ಜ್ಞಾನಿಯಾಗಿ ಭೂತಗಳು, ಗ್ರಹಗಳು ಲೆಕ್ಕಿಸಿ ಅವನನ್ನು ಗೌರವಿಸುತ್ತಿವೆ. ಅವನ ಬಗ್ಗೆ ಗೌರವ ಭಾವನೆ ಹೊಂದಿವೆ. ದೈವಜ್ಞಾನ ಇಲ್ಲದವರಬಳಿ ದೇವರ ಪಾಲಕರು ವಿಮುಖತೆ ಹೊಂದಿ ಗೌರವಭಾವನೆ ಇಲ್ಲದವರಾಗಿ ಇರುತ್ತಾರೆ. ಅಜ್ಞಾನಿಗಳಾದವರು ದೇವರನ್ನು ಶರೀರದಲ್ಲಾಗಲೀ, ಶರೀರದ ಹೊರಗಾಗಲೀ ಯಾವುದೆ ತಿಳಿಯದೆಹೋಗುವು ದಲ್ಲದೆ, ತಿಳಿಯುವುದಕ್ಕೆ ಪ್ರಯತ್ನ ಮಾಡದೆ, ಚಿಲ್ಲರೆ ದೇವತೆಗಳನ್ನು, ಅಂದರೆ ದೇವರು ಸೃಷ್ಠಿಸಿದ ಅನೇಕಮಂದಿ ದೇವತೆಗಳನ್ನು ಆಶ್ರಯಿಸಿ ಕೈಮುಗಿಯುವ ವರನ್ನು ನೋಡಿದರೆ ಗ್ರಹಗಳಿಗು, ಭೂಗಳಿಗು, ವಿಪರೀತವಾದ ಕೋಪವೆಂದು ಹೇಳಬಹುದು. ಇತರೆ ದೇವತೆಗಳ ದರ್ಶನಾರ್ಥವಾಗಿ ಹೋಗುವವರನ್ನು ಮಾತ್ರ ಎದುರುಗೊಂಡು ರಸ್ತೆ ಅಪಘಾತಗಳನ್ನು, ಗ್ರಹಗಳು, ಭೂತಗಳು, ಮಾಡುತ್ತಿವೆ. ದೇವತೆಗಳಿಗೆ ಹೋಗುವ ಪ್ರಯಾಣಗಳು ಪಾಲಕರಿಗೆ ಸರಿಹೋಗುವು ದಿಲ್ಲ. ತಮ್ಮನ್ನು ಹುಟ್ಟಿಸಿದ ದೇವರನ್ನು ಬಿಟ್ಟು ದೇವತೆಗಳನ್ನು ಆರಾಧಿಸುವುದು, ಧರ್ಶಿಸುವುದಕ್ಕಾಗಿ ಮಾಡುವ ಪ್ರಯಾಣಗಳೇ ಹೆಚ್ಚಾಗಿ ಪ್ರಮಾದಕ್ಕೆ ಗುರಿಯಾಗುತ್ತಿವೆ. ಪ್ರಮಾದ ಮಾಡಿದವರು ಭೂತಗಳಾದರೆ ಮನುಷ್ಯರನ್ನು ಸಾಯಿಸುವುದು ಮಾಡುತ್ತಾರೆ. ಗ್ರಹಗಳಾದರೆ ಸಾಯಿಸದೆ ಗಾಯಗಳ ಪಾಲು ಮಾಡುತ್ತಾರೆ. ಪ್ರಯಾಣಗಳು ಎಷ್ಟು ನಡೆಯುತ್ತಿದ್ದರೂ ಹೆಚ್ಚಾಗಿ ದೇವತೆಗಳ ದರ್ಶನಕ್ಕೆ ಹೋಗುವವರವೇ ನಡೆದಿರುತ್ತವೆ.

ದೇವತೆಗಳ ಪ್ರಯಾಣವೇ ಅಲ್ಲದೆ ನಂತರ ಹೆಚ್ಚಾಗಿ ರಸ್ತೆ ಅಪಘಾತಗಳು ನಡೆಯುವುದು ಮದುವೆ ವಿಷಯದಲ್ಲಿಯೇ. ಮದುವೆ ಕಾರ್ಯವೆಲ್ಲವೂ ದೈವಸಂಬಂಧವಾದುದಾಗಿ ಇದೆ. ಆ ವಿಷಯ ನಾವು **“ಇಂದೂ**

**ಸಾಂಪ್ರದಾಯಗಳು"** ಎನ್ನುವ ಗ್ರಂಥದಲ್ಲಿ ಬರೆದಿದ್ದೇವೆ. ಮದುವೆಗಳಲ್ಲಿ ಪ್ರತಿಕಾರ್ಯ ದೇವರ ಜ್ಞಾನಕ್ಕೆ ಸಂಬಂಧಿಸಿರುವುದಾಗಿ ಇರುವಾಗ, ಈದಿನ ಯಾರೂ ಆ ವಿಧವಾಗಿ ಜ್ಞಾನಪದ್ಧತಿಯಾಗಿ, ಜ್ಞಾನ ತಿಳಿದು ಮದುವೆಗಳು ಮಾಡುತ್ತಿಲ್ಲ. ಆದ್ದರಿಂದ ಮದುವೆಕಾರ್ಯಗಳಿಗೆ ಪ್ರಾರಂಭದಲ್ಲಾಗಲಿ, ಮದುವೆಗಳಲ್ಲಾಗಲಿ, ಮದುವೆ ನಂತರವಾಗಲಿ, ಪ್ರಯಾಣ ಮಾಡುವಾಗಾಗಲಿ ಇಲ್ಲವೇ ಉಳಿದ ಸಮಯದ ಲ್ಲಾಗಲಿ ದೇವರ ಪಾಲಕರು ಪ್ರಮಾದಗಳನ್ನು ಉಂಟುಮಾಡಬೇಕೆಂದು ನೋಡುತ್ತಿರುತ್ತಾರೆ. ಮಾಡುತ್ತಿರುತ್ತಾರೆ. ಯಾವಾಗ ಅವಕಾಶಬಂದರೆ ಆಗ ಪ್ರಮಾದಗಳನ್ನು ಉಂಟುಮಾಡುತ್ತಾರೆ. ಹೆಚ್ಚಾಗಿ ಮದುವೆಗೆ ಸಂಬಂಧಿಸಿದ, ಮದುವೆ ವ್ಯವಹಾರದಲ್ಲಿ ರಸ್ತೆ ಅಪಘಾತಗಳು ಹೆಚ್ಚಾಗಿ ನಡೆದಂತೆ ತಿಳಿಯುತ್ತಿದೆ. ಇದೆಲ್ಲವೂ ನೋಡಿದರೆ "ಮನುಷ್ಯರಿಗೆ ಜ್ಞಾನವಿಲ್ಲದೆ ಹೋಗುವುದೇ ಮೊದಲ ಕಾರಣ" ಎಂದು ತಿಳಿಯುತ್ತಿದೆ. ಮದುವೆ ಕಾರ್ಯದಲ್ಲಾಗಲೀ, ಮದುವೆ ಪ್ರಯಾಣದಲ್ಲಾಗಲಿ ಯಾರಾದರೂ ಜ್ಞಾನಿಯಾದವನಿದ್ದರೆ ಪಾಲಕರಿಗೆ ಜ್ಞಾನ ತಿಳಿಯುತ್ತದಾದ್ದರಿಂದ ಜ್ಞಾನಿಯನ್ನು ಗೌರವಿಸಿ, ಅಲ್ಲಿ ಪ್ರಮಾದಗಳು ಮಾಡದಂತಿರುತ್ತಾರೆ, ಹಣೆಯ ಭಾಗದಲ್ಲಿ ದೇವರ ಗುರುತನ್ನು ಧರಿಸಿ ಇರುವವರಿದ್ದರೂ ಅಲ್ಲಿ ಪ್ರಮಾದ ತಪ್ಪಿಹೋಗುತ್ತದೆ. ದೇವರ ಜ್ಞಾನವೆಂದರೇ ಎಷ್ಟೋ ಅಭಿಮಾನ, ಗೌರವ. ಹಾಗೆಯೇ ಅಜ್ಞಾನವೆಂದರೇ ಪಾಲಕರಿಗೆ ಅಸಹ್ಯ, ಅಂತಹವರನ್ನು ನೋಡಿದರೆ ಶತ್ರುಗಳನ್ನು ನೋಡಿದಂತೇ ಇರುತ್ತದೆ.

ದೇವರ ಗುರುತು ಧರಿಸದವರನ್ನೇ ಬಾಧಿಸಿರೆಂದು, ದೇವರ ಮುದ್ರೆಯನ್ನು ಧರಿಸದ ಗಿಡಮರಗಳನ್ನಾಗಲಿ, ಹುಲ್ಲನ್ನಾಗಲಿ ಬಾಧಿಸಬೇಡವೆಂದು ಪ್ರಕೃತಿಯಿಂದ ಅಂದರೇ ಪ್ರಕೃತಿ ಹಿಂದಿರುವ ದೇವರಿಂದ ಅಜ್ಞೆ ಇದೆಯೆಂದು ಬೈಬಲ್ ಪ್ರಕಟಣೆ ಗ್ರಂಥದಲ್ಲಿ 9ನೇ ಅಧ್ಯಾಯದಲ್ಲಿ 4ನೇ ವಚನದಲ್ಲಿ ಹೇಳಿರುವ ಮಾತನ್ನು ಕೇಳಿದ್ದೀರ ಅಲ್ಲವೆ! ಈ ಮಾತನ್ನನುಸರಿಸಿ ದೇವರ ಮುದ್ರೆಯನ್ನು ಧರಿಸದವರನ್ನು ನೋಡಿದರೆ ಪ್ರಕೃತಿಗೆ ಸರಿಹೋಗುವುದಿಲ್ಲವೆಂದು ಒಂದುವಿಧ ವಾಗಿ ಅರ್ಥವಾಗುತ್ತಿದೆ. ಹಾಗಲ್ಲದಿದ್ದರೆ ದೇವರಮುದ್ರೆ ಧರಿಸುವುದರಿಂದ

ಅವನ ಪಾಪ ಕ್ಷಮಿಸಲ್ಪಡುತ್ತಿದೆಯೆಂದು ಆದ್ದರಿಂದ ಅವರನ್ನು ಬಾಧಿಸಬೇಡ ವೆಂದು ಹೇಳಿದಂತಿದೆ. ಇದೆಲ್ಲವನ್ನು ಗಮನಿಸಿದರೆ ದೇವರಿಗೆ (ಪ್ರಕೃತಿಗೆ) ದೇವರ ಪಾಲಕರಿಗೆ ದೇವರ ಮುದ್ರೆ ಎಂದರೇ ಇಷ್ಟವೆಂದು ತಿಳಿಯಬೇಕು. ಇದು ದೆವ್ವಗಳಿಗೆ ಅಥವಾ ಸೂಕ್ಷ್ಮಶರೀರಗಳಿಗೆ ಅಗ್ನಿಕುಂಡದಂತೆ ಶಾಖವನ್ನು ಹೊರಹೊಮ್ಮುತ್ತಿರುತ್ತದೆ. ಆದ್ದರಿಂದ ಮರಣಿಸಿದ ನಂತರ ಅಂದರೆ ಆಕಾಲ ಮೃತ್ಯಹೊಂದಿದವರು ದೇವರ ಮುದ್ರೆಯನ್ನು ಧರಿಸಿದವರನ್ನು ನೋಡಿ ಭಯಪಟ್ಟು ದೂರವಾಗಿರುತ್ತಾರೆ. ದೆವ್ವಗಳಾಗಿರುವವರು ಅಜ್ಞಾನಿಗಳಾಗಿದ್ದರೆ ದೇವರಮುದ್ರೆಯ ಶಾಖ ತಗಲುತ್ತಿರುತ್ತದೆ. ದೆವ್ವಗಳಾಗಿರುವವರು ಸ್ವಲ್ಪವಾದರೂ ದೇವರಜ್ಞಾನ ತಿಳಿದಿದ್ದರೆ ಅವರಿಗೆ ದೇವರ ಚಿಹ್ನೆಯಿಂದ ಎಂತಹ ಬಾಧೆ ಇರುವುದಿಲ್ಲ.

ದೇವರ ಮುದ್ರೆಯನ್ನು ಧರಿಸಿದವರನ್ನು ನೋಡಿದರೆ ಭಯಪಡುವು ದರಿಂದ, ದೆವ್ವಗಳು ದೇವರಮುದ್ರೆಯನ್ನು ಧರಿಸಿದವರೊಳಗೆ ಸೇರುವುದಿಲ್ಲ. ಮೊದಲೇ ಅವರ ಶರೀರದಲ್ಲಿ ದೆವ್ವಗಳಿದ್ದರೂ, ಅವರು ದೇವರಮುದ್ರೆಯನ್ನು ಧರಿಸುವುದರಿಂದ ಅವರ ಶರೀರದಲ್ಲಿನ ದೆವ್ವಕ್ಕೆ ತೊಂದರೆ ಉಂಟಾಗುತ್ತದೆ. ಆದ್ದರಿಂದ ಹೊಸದಾಗಿ ಆರು ತಿಂಗಳು ಇಲ್ಲವೆ ವರ್ಷ ಇದ್ದ ದೆವ್ವಗಳಾದರೆ ಶರೀರವನ್ನು ಬಿಟ್ಟು ಓಡಿಹೋಗುತ್ತವೆ. ವರ್ಷಕ್ಕಿಂತ ಹೆಚ್ಚುಕಾಲದಿಂದ ದೆವ್ವಗಳಿರುವವರಿಗೆ ಅವರ ಶರೀರಗಳಿಂದ ದೆವ್ವ ಹೊರಗೆ ಹೋಗಲಾರದೆ ತೊಂದರೆಪಡುತ್ತಿರುತ್ತದೆ. ಮೂರು ಅಥವಾ ನಾಲ್ಕು ವರ್ಷಗಳಿಗಿಂತ ಹೆಚ್ಚುಕಾಲದಿಂದಿರುವ ಅವರ ಪರಿಸ್ಥಿತಿ ಶರೀರದಲ್ಲಿ ಬಹಳ ಕಷ್ಟವಾಗಿರುತ್ತದೆ. ಶರೀರದಲ್ಲಿ ಸಿಲುಕಿಕೊಂಡು ಹೋಗಿರುವುದರಿಂದ ಅವರು ಹೋಗಬೇಕೆಂದು ಕೊಂಡರೂ ಹೋಗಲಾರದ ಪರಿಸ್ಥಿತಿಯಲ್ಲಿರುತ್ತಾರೆ.

ದೇವರ ಮುದ್ರೆ ಎಂದರೂ, ದೇವರ ಚಿಹ್ನೆ ಎಂದರೂ ಎರಡು ಒಂದಾಗಿಯೇ ನೋಡಬೇಕು. ಮನುಷ್ಯನ ಶರೀರದಲ್ಲಿರುವ ದೇವರು, ಶರೀರದ ಹೊರಗಿನ ದೇವರು ಎಂದು ಎರಡು ವಿಧಗಳ ಜ್ಞಾನವನ್ನು ತಿಳಿಯಬೇಕಾಗಿದೆ. ಆದರೇ ಯಾರಿಗಾದರೂ ಶರೀರದೊಳಗಿರುವ ದೇವರೇ ಆರಾಧ್ಯ ದೇವರೆಂದು,

ಆತನೊಬ್ಬನೇ ಆರಾಧ್ಯದೈವವೆಂದು ಮೂರು ದೈವಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ದೇವರಜ್ಞಾನ ಸಂಪೂರ್ಣವಾಗಿ ತಿಳಿದರೆ, ಸೃಷ್ಠಿಪೂರ್ವದಲ್ಲಿದ್ದ ದೇವರಾದ ಪರಮಾತ್ಮ, ಸೃಷ್ಠಿನಂತರ ದೇವರಾದ ಆತ್ಮಯೆಂದು ಎರಡು ವಿಧಗಳು ತಿಳಿದುಕೊಂಡರೆ, ಸ್ವತಃ ಪರಮಾತ್ಮನಾದ ದೇವರು ಆತ್ಮನಾದ ದೇವರನ್ನೇ ಆರಾಧಿಸಿರೆಂದು ತಿಳಿಸಿದ್ದಾನೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಮೂರು ದೈವಗ್ರಂಥಗಳಲ್ಲಿ ಶರೀರದಲ್ಲಿರುವ ಆತ್ಮನಾದ ದೇವರನ್ನೇ ಆರಾಧ್ಯ ದೈವವೆಂದು ಹೇಳಿರುವಂತೆ ಅರ್ಥವಾಗುತ್ತದೆ. ಈ ವಿಧವಾಗಿ ತಿಳಿಯುವುದರಿಂದ ಸೃಷ್ಠಿ ಮೊದಲು ದೇವರೆಂದು ಸೃಷ್ಠಿನಂತರ ದೇವರೆಂದು ಒಂದೇ ದೇವರನ್ನೇ ಹೇಳಿ ಕೊಳ್ಳುತ್ತಿದ್ದೇವೆ. ಒಂದೇ ದೇವರನ್ನೇ ಹಾಗೆ ಹೇಳಬೇಕಾಗಿ ಬಂದಿದೆ. ಆದ್ದರಿಂದ ಒಂದೇ ಗುರುತನ್ನೇ ಮುದ್ರೆ, ಚಿಹ್ನೆ ಎಂದು ಎರಡು ಹೆಸರುಗಳಿಂದ ಹೇಳಿದರೂ ಅವು ಎರಡು ಒಂದೇಯೆಂದು ತಿಳಿಯಬೇಕು. ಜ್ಞಾನ ವಿವರಕ್ಕಾಗಿ ಶರೀರದಲ್ಲಿರುವ ದೇವರ ಸಲುವಾಗಿ **'ದೇವರಚಿಹ್ನೆ'** ಎಂದೂ, ಶರೀರದ ಹೊರಗೆ ಇರುವ ದೇವರ ನಿಮಿತ್ತ **'ದೇವರ ಮುದ್ರೆ'** ಎಂದು ಹೇಳುತ್ತಿದ್ದೇವೆ. ಆದರೆ ಹಿಂದೂಗಳು ಮುಖ್ಯವಾಗಿ ಮೊದಲು ದೇವರ ಚಿಹ್ನೆಯನ್ನು, ನಂತರ ದೇವರ ಮುದ್ರೆ ಎರಡೂ ತಿಳಿಯಬೇಕಾಗಿದೆ. ಕ್ರೈಸ್ತರ ವಿಷಯಕ್ಕೆ ಬಂದರೆ ಅವರು ದೇವರ ಮುದ್ರೆಯನ್ನು ಮೊದಲು ನಂತರ ಚಿಹ್ನೆಯನ್ನು ತಿಳಿಯಬೇಕಾಗಿದೆ. ಇನ್ನು ಮುಸ್ಲಿಮ್‌ರ ವಿಷಯದಕ್ಕೆ ಬಂದರೆ ಮೊದಲು ದೇವರ ಚಿಹ್ನೆಯನ್ನು ನಂತರ ದೇವರ ಮುದ್ರೆಯನ್ನು ತಿಳಿಯಬೇಕಾಗಿದೆ.

ಮುಸ್ಲಿಮ್‌ರು ತಮ್ಮ ಗ್ರಂಥವೆಂದು ಹೇಳಿಕೊಳ್ಳುವ ಖುರ್‌ಆನ್ ಗ್ರಂಥದಲ್ಲಿ 5ನೇ ಸೂರಾ, 2ನೇ ಆಯತ್ (5-2) ರಲ್ಲಿ ಮತ್ತು (22-32) ರಲ್ಲಿ **'ದೇವರ ಚಿಹ್ನೆ'** ಎನ್ನುವ ಹೆಸರಿನಿಂದ ವಾಕ್ಯಗಳಿವೆ. ಆದ್ದರಿಂದ ಮುಸ್ಲಿಮ್‌ರು ಮೊದಲು ದೇವರ ಚಿಹ್ನೆಯನ್ನು ಕುರಿತು ತಿಳಿಯಬೇಕು. ದೇವರ ಚಿಹ್ನೆಯನ್ನು ಕುರಿತು ಅರ್ಥಮಾಡಿಕೊಂಡ ನಂತರ ಅದೇ ಚಿತ್ರಪಟವನ್ನು ದೇವರ ಮುದ್ರೆಯಾಗಿ ಕೂಡಾ ತಿಳಿದುಕೊಳ್ಳಬೇಕಾಗಿದೆ. ಕ್ರೈಸ್ತರ ವಿಷಯಕ್ಕೆ ಬಂದರೆ ಕ್ರೈಸ್ತರು ತಮ್ಮ ಗ್ರಂಥವೆಂದು ಹೇಳಿಕೊಳ್ಳುತ್ತಿರುವ ಬೈಬಲ್ ಗ್ರಂಥದಲ್ಲಿ 'ಪ್ರಕಟಣೆ ಗ್ರಂಥ' ಎನ್ನುವ

ಪಾಠದಲ್ಲಿ **'ದೇವರ ಮುದ್ರೆ'** ಎಂದು ಹೇಳಿರುವುದರಿಂದ ಕ್ರೈಸ್ತರು ದೇವರ ಮುದ್ರೆಯನ್ನು ಕುರಿತು ಮೊದಲು ತಿಳಿದು ನಂತರ ದೇವರ ಚಿಹ್ನೆಯನ್ನು ಕುರಿತು ತಿಳಿಯಬೇಕು. ಹಿಂದೂಗಳ ಭಗವದ್ಗೀತೆಯಲ್ಲಿ ದೇವರ ಚಿಹ್ನೆ ಎಂದಾಗಲಿ, ದೇವರ ಮುದ್ರೆ ಎಂದಾಗಲಿ ಎಲ್ಲಿಯೂ ಹೆಸರಿಟ್ಟು ಬರೆಯಲ್ಪಡಲಿಲ್ಲ. ಆದರೆ ಇಲ್ಲಿಯೇ ಎರಡು ವಿಧಾನಗಳನ್ನು ಕುರಿತು ತಿಳಿಯಲ್ಪಟ್ಟಿದೆ. ಮೂರು ಮತದವರಿಗೆ, ಮೂರು ಗ್ರಂಥಗಳಲ್ಲಿ ಸಮಾನವಾದ ಜ್ಞಾನ ಹೇಳಲ್ಪಟ್ಟಿದೆ. ಅಷ್ಟೇ ಅಲ್ಲದೆ ಯಾವ ಗ್ರಂಥವು ಪ್ರತ್ಯೇಕಿಸಿ ಯಾವ ಮತದ್ದು ಅಲ್ಲ. ಯಾವ ಗ್ರಂಥವಾದರೂ ಎಲ್ಲಾ ಮತದವರಿಗು ಎಲ್ಲಾ ಹೇಳಲ್ಪಟ್ಟಿದೆ ಆದರೆ ಇಂತಹ ಮತದವರಿಗೆಂದು ಹೇಳಿರಲಿಲ್ಲ. ಆದ್ದರಿಂದ ಮೂರು ಮತದವರು ಒಂದೇ ದೇವರ ಜ್ಞಾನವನ್ನು ತಿಳಿಯುತ್ತಿದ್ದಾರೆ. ಒಂದೇ ದೇವರ ಜ್ಞಾನವನ್ನೇ ದೈವಗ್ರಂಥಗ ಳಲ್ಲಿ ಹೇಳಿದಂತೆ ಎರಡು ವಿಧಗಳ ಗುರುತಾಗಿ ಹೇಳಿರುವ ದೇವರಮುದ್ರೆ ದೇವರಚಿಹ್ನೆ ಒಂದರ ಜ್ಞಾನ ತಿಳಿದರೆ ಸಂಪೂರ್ಣ ಜ್ಞಾನಗಳಾದಂತೆ. ಆಕಾಶದಲ್ಲಿಯೂ, ಭೂಮಿಮೇಲೆಯೂ ವ್ಯಾಪಿಸಿದ ದೇವರ ಪಾಲಕರಾದ ಭೂತಗಳು, ಗ್ರಹಗಳಿಬ್ಬರು ಎರಡು ಗುರುತುಗಳನ್ನು ತಿಳಿದವರಾಗಿ ಅವರು ದೇವರ ಗುರುತನ್ನು ಧರಿಸುತ್ತಿದ್ದಾರೆ.

ಮೊಟ್ಟಮೊದಲು ಭೂಮಿಮೇಲೆ ಎರಡುಸಾವಿರ ವರ್ಷಗಳ ಸಮಯ ದಲ್ಲಿ 'ಮತ' ಎನ್ನುವ ಹೆಸರಿಟ್ಟುಕೊಂಡು ಹುಟ್ಟಿರುವುದು ಕ್ರೈಸ್ತವವು. ಅಲ್ಲಿಯವರೆಗು ಸೃಷ್ಠಿ ಆದಿಯಿಂದ ಇರುವ ಹಿಂದೂ ಸಮಾಜ, ಕ್ರೈಸ್ತ ಮತ ಹುಟ್ಟಿದ ನಂತರ ಹಿಂದೂಮತವಾಗಿ ಬದಲಾಗಿದೆ. ಕ್ರೈಸ್ಥ ಸಮಾಜದವರು ತಮ್ಮನು ಕ್ರೈಸ್ತ ಮತವಾಗಿ ಹೇಳಿಕೊಂಡ ನಂತರ ಉಳಿದ ಮತಗಳಿಗೆ ಅಂಕುರಾರ್ಪಣೆ ನಡೆದಿದೆ. ಈದಿನ ಭೂಮಿಮೇಲೆ ಒಟ್ಟು ಹನ್ನೆರಡು ಮತಗಳಿರುವಾಗ ಅದರಲ್ಲಿ ದೊಡ್ಡವು, ಮುಖ್ಯವಾದ ಜ್ಞಾನ ಇರುವವು ಮೂರು ಮಾತ್ರವೇ. ಅವುಗಳೇ **ಇಂದೂ, ಇಸ್ಲಾಮ್, ಕ್ರೈಸ್ಥ** ಎಂದು ಮೂರು ಮತಗಳಾಗಿವೆ. ಮೂರು ಮತದವರು ದೇವರ ಹೇಳಿದ ಒಂದೇ ಜ್ಞಾನವನ್ನು ಮತಗಳ ಗ್ರಂಥಗಳಾಗಿ ವಿಭಜಿಸಿ ಕೊಂಡಿದ್ದಾರೆ. ಯಾರು ಹೇಗೆ ಹೇಳಿಕೊಂಡರೂ, ಮೂರು ಗ್ರಂಥಗಳಲ್ಲಿಯೂ

**‘ಒಂದೇ ದೇವರು, ಒಂದೇ ಜ್ಞಾನ’** ಇದೆ. ಮೂರು ಗ್ರಂಥಗಳಲ್ಲಿಯೂ ಮೂರು ಆತ್ಮಗಳನ್ನು ಕುರಿತು ಹೇಳಿರುವುದೇ ಮುಖ್ಯವಾದ ಜ್ಞಾನವಾಗಿದೆ. ಮೂರು ಗ್ರಂಥಗಳಲ್ಲಿ ಗ್ರಂಥಕ್ಕೆ ಆಧಾರವಾದ ಮುಖ್ಯ ಜ್ಞಾನವಾಗಿ ಮೂರು ಆತ್ಮಗಳ ಜ್ಞಾನವೇ ಇದೆ. ಮೂರು ಗ್ರಂಥಗಳಲ್ಲಿಯೂ ಗ್ರಂಥಗಳ ಮಧ್ಯಭಾಗದಲ್ಲಿ ಮೂರು ಆತ್ಮಗಳನ್ನು ಕುರಿತು ಹೇಳಿದ್ದಾರೆ. ಚೆನ್ನಾಗಿ ಆಲೋಚಿಸಿದರೆ ಮೂರು ಗ್ರಂಥಗಳಲ್ಲಿ ಯಾವ ಗ್ರಂಥಕ್ಕಾದರೂ ಮುಖ್ಯ ಸೂತ್ರ, ಆಧಾರಿತ ಜ್ಞಾನ ಮೂರು ಆತ್ಮಗಳನ್ನು ಕುರಿತು ಹೇಳಿದ ಜ್ಞಾನವೇ. ಮೂರು ಆತ್ಮಗಳಿಗೆ ಸಂಬಂಧಿಸಿದ ಅನುಬಂಧ ಜ್ಞಾನವೇ ಉಳಿದ ಗ್ರಂಥವೆಲ್ಲಾ ಇರುವುದು ಗಮನಿಸಬಹುದು. ಈ ಮೂರು ಆತ್ಮಗಳನ್ನು ಆಧಾರ ಮಾಡಿಕೊಂಡು ದೇವರ ಚಿಹ್ನೆಯನ್ನು, ಹಾಗೇ ದೇವರ ಮುದ್ರೆಯನ್ನು ಹೇಳಿದ್ದಾರೆಂದು ತಿಳಿಯುತ್ತಿದೆ. ಮೂರು ಗ್ರಂಥಗಳಲ್ಲಿಯೂ ಸೃಷ್ಠಿ ಪೂರ್ವದಲ್ಲಿ ದೇವರು, ಸೃಷ್ಠಿ ನಂತರ ದೇವರು ಎರಡು ವಿಧಗಳ ವಿಭಜಿಸಲ್ಪಟ್ಟು ಕಾಣಿಸುತ್ತಿದ್ದಾನೆ. ಆ ಎರಡು ವಿಧಗಳ ದೇವರುಗಳನ್ನು ಕುರಿತು ಬರೆದು ತೋರಿಸಿರುವವೇ **“ದೇವರ ಚಿಹ್ನೆ”, “ದೇವರ ಮುದ್ರೆ”** ಎಂದು ತಿಳಿಯಬೇಕು.

ಮನುಷ್ಯರಿಗೆ ದೇವರು ಪ್ರಸಾದಿಸಿದ ಮೂರು ದೈವಗ್ರಂಥಗಳಲ್ಲಿಯೂ ಮನುಷ್ಯ ಪುನಃ ದೇವರನ್ನು ಸೇರಿಕೊಳ್ಳುವ ವಿಧಾನವಿದ್ದರೂ ಅದನ್ನು ಮನುಷ್ಯ ಗ್ರಹಿಸದೇ ಇದ್ದಾನೆ. ಆದರೇ ಮೂರು ಮತದವರು ಯಾರಿಗವರು ದೇವರನ್ನು ಕುರಿತು ಹೇಳುತ್ತಿದ್ದಾರೆ. ನಾವು ದೇವರ ಮಾರ್ಗದಲ್ಲಿ ಎಲ್ಲರಿಗಿಂತ ಮುಂದೆ ಇದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಮೂರು ಮತದವರು ದೇವರಕಡೆಯೇ ಪ್ರಯಾಣ ಮಾಡುತ್ತಿದ್ದರೂ, ಅವರು ಮುಂದೆ ಹಿಂದೆ ಇದ್ದಾರೆಂದು ಹೇಳಬಹುದು. ಹಿಂದೂಗಳಿಗಿಂತ ಕ್ರೈಸ್ಥರು ನಾವು ದೇವರ ಮಾರ್ಗದಲ್ಲಿ ಮುಂದಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ಹಾಗೇ ಮುಸ್ಲಿಮ್‌ರು ಹಿಂದೂ ಕ್ರೈಸ್ಥರಿಗಿಂತ ನಮ್ಮ ಜ್ಞಾನವೇ ದೊಡ್ಡದು, ಅವರಿಗಿಂತ ನಾವೇ ನಿಜವಾದ ಜ್ಞಾನ ಇರುವವರು, ಅವರ ದೇವರುಗಳಿಗಿಂತ ನಮ್ಮ ಅಲ್ಲಾಹ್‌ನೇ ದೊಡ್ಡವ ಎನ್ನುತ್ತಿದ್ದಾರೆ. ಯಾರಿಗವರು ದೊಡ್ಡದು ಎಂದು ಹೇಳಿಕೊಳ್ಳುವುದು

ಸಹಜವೇ ಆದರೂ, ನಿಜವಾಗಲೂ ಮೂರು ಮತದವರಲ್ಲಿ ಯಾರು ಮುಂದಿದ್ದಾರೆಂದು ನಾವು ನೋಡಿದಂತಾದರೆ ಹೀಗೆ ತಿಳಿಯುತ್ತಿದೆ. ದೇವರ ಜ್ಞಾನಕ್ಕೆ ಆಧಾರ, ಅಚ್ಚು ಎಲ್ಲಾ ಮೂರು ಆತ್ಮಗಳೇ. ದೇವರು ಮೂರು ಆತ್ಮಗಳ ರೂಪವಾಗಿಯೇ ಇದ್ದಾನೆ, ಆದ್ದರಿಂದ ಜ್ಞಾನವೆಲ್ಲವೂ ಮೂರು ಆತ್ಮಗಳನ್ನು ಆಧಾರ ಮಾಡಿಕೊಂಡೇ ಇರುತ್ತದೆ. ಮೂರು ಆತ್ಮಗಳನ್ನು ಆಧಾರ ಮಾಡಿಕೊಂಡಿರುವ ಜ್ಞಾನವೇ ಮೂರು ದೈವಗ್ರಂಥಗಳಲ್ಲಿ ಇದೆ.

ಈ ದಿನ ಮೂರು ಮತದವರು ಅವರವರ ಮತ ಆಚಾರಗಳ ಮೇಲೆ ತೋರಿಸಿದ ಶ್ರದ್ಧೆಯನ್ನು ದೇವರ ಗ್ರಂಥದಲ್ಲಿ ಹೇಳಿದ ಜ್ಞಾನದ ಮೇಲೆ ತೋರಿಸಲಿಲ್ಲ. ಆದ್ದರಿಂದ ಸಂಪೂರ್ಣವಾದ ಜ್ಞಾನ ಮೂರು ಗ್ರಂಥದಲ್ಲಿದ್ದರೂ ಅದನ್ನು ಮನುಷ್ಯರು ತಿಳಿಯಲಾರದೆ ಹೋಗಿದ್ದಾರೆ. ಹಿಂದೂಮತದಲ್ಲಿ 'ದೇವರು' ಎನ್ನುವ ಪದವನ್ನು ಮರೆತುಹೋಗಿ, 'ದೇವತೆಗಳು' ಎನ್ನುವ ಪದದಲ್ಲಿ ಮುಳುಗಿ ಹೋಗಿದ್ದಾರೆ. ಅವರಿಗೆ ಭಗವದ್ಗೀತೆಯಲ್ಲಿ ಹೇಳಿದ ಮೂವರು ಪುರುಷರ ಜ್ಞಾನವೇ ತಿಳಿಯದಂತೆ ಹೋಗಿದೆ. ದೇವರ ಮೇಲೆ ವಿಶ್ವಾಸದಲ್ಲಿ ಎಲ್ಲರಿಗಿಂತ ಮುಂದಿರುವವರು ಮುಸ್ಲಿಮ್‌ರೇ ಆದರೂ ಅವರಿಗೆ ಮೂಲಾಧಾರವಾದ ಆತ್ಮಜ್ಞಾನ ತಿಳಿದಿಲ್ಲ. ಮುಸ್ಲಿಮ್‌ರಲ್ಲಿ ಪ್ರರ್ಥಾನೆ, ವಿಶ್ವಾಸ ಎರಡೂ ಗಟ್ಟಿಯಾಗಿವೆ. ಗಮ್ಯವು ತಿಳಿಯದ ಪ್ರಯಾಣದಂತೆ ಅವರು ದೇವರು ಒಬ್ಬನೇಯೆಂದು ದೇವರ ಮೇಲಿನ ವಿಶ್ವಾಸದಿಂದ ದೇವರ ಪ್ರಾರ್ಥನೆ ಮಾಡುತ್ತಿದ್ದರೂ ಅವರು ತಮ್ಮ ಗ್ರಂಥದಲ್ಲಿ ಹೇಳಿದ ಜ್ಞಾನವನ್ನು ಬಿಟ್ಟು ಎಷ್ಟುಕಾಲ ಪ್ರಾರ್ಥನೆ ಮಾಡಿದರೂ ವೃಥಾ ಶ್ರಮವಾಗುತ್ತದೆ. ಮನೆಗೆ ಹೋಗಬೇಕೆಂದು ನಡೆಯುತ್ತಿದ್ದರೂ ದಾರಿ ತಿಳಿಯದಿರುವಾಗ ಸ್ಮಶಾನಕ್ಕೆ ಹೋದಂತಿರುತ್ತದೆ. ದೈವಜ್ಞಾನಕ್ಕೆ ಮೂಲಾಧಾರವಾದ ವಾಕ್ಯ ಖುರಾನ್ ಗ್ರಂಥದಲ್ಲಿ **ಸೂರಾ 50, ಆಯತ್ 21ರಲ್ಲಿ ಇರುವ ಮೂರು ಆತ್ಮಗಳ ವಿಷಯ** ತಿಳಿಯದಿರುವುದರಿಂದ ಅವರಲ್ಲಿ ಕೂಡಾ ಯಾರೂ ಸಾರ್ಥಕತೆ ಹೊಂದಲಾರದೆ ಹೋಗಿದ್ದಾರೆ. ಆದರೂ ಆ ವಿಷಯ ಅವರಿಗೆ ತಿಳಿದಿಲ್ಲ. ನಾವು ಎಲ್ಲರಿಗಿಂತ ಜ್ಞಾನಿಗಳಾಗಿದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ಅವರು ಸ್ವಲ್ಪವಾದರೂ ಹಿಂತಿರುಗಿ ನೋಡಿಕೊಳ್ಳಲಿಲ್ಲ.

ಮೂರು ಆತ್ಮಗಳ ಜ್ಞಾನ ಸಕಲ ಜ್ಞಾನಕ್ಕೆ ಮೂಲಾಧಾರವಾಗಿದೆ. ಭಗವದ್ಗೀತೆಯಲ್ಲಿ ಹೇಳಿದ **ಕ್ಷರನು, ಅಕ್ಷರನು, ಪುರುಷೋತ್ತಮನು** ತಿಳಿಯದಿರುವಾಗ ಅವರು ಎಷ್ಟು ದೊಡ್ಡ ಜ್ಞಾನಿಯಾದರೂ ಏನೂ ಪ್ರಯೋಜನೆ ಇರುವುದಿಲ್ಲ. ಹಾಗೆಯೇ ಬೈಬಲ್ ಗ್ರಂಥದಲ್ಲಿ ಹೇಳಿದ **ತಂದೆ, ಕುಮಾರ, ಪರಿಶುದ್ಧಾತ್ಮ**ನನ್ನು ಕುರಿತು ತಿಳಿಯದ ಕ್ರೈಸ್ಥರು ದಾರಿತಪ್ಪಿ ನಡೆದಂತಾಗುತ್ತದೆ. ಎಷ್ಟು ಪ್ರಾರ್ಥನೆ ಮಾಡಿದರೂ ಫಲಿತಾಂಶವಿಲ್ಲದೆ ಹೋಗುತ್ತದೆ. ಆದರೇ ಉಳಿದೆರಡು ಮತದವರು ಮೂರು ಆತ್ಮಗಳ ವಿಷಯ ತಿಳಿಯದಿದ್ದರೂ, ಒಂದು ಕ್ರೈಸ್ಥ ಮತದವರು ಮಾತ್ರ ಮೂರು ಆತ್ಮಗಳ ಹೆಸರುಗಳು ಹೇಳಿಕೊಳ್ಳುತ್ತಿದ್ದಾರೆ. ತಂದೆ, ಕುಮಾರನು, ಪರಿಶುದ್ಧಾತ್ಮ ಮೂರು ಆತ್ಮಗಳ ಹೆಸರುಗಳನ್ನು ಹೇಳುವವರೆಗೇ ಪರಿಮಿತವಾಗಿದ್ದಾರೆ. ಅದೂ ಮತ್ತಾಯ ಸುವಾರ್ತೆಯಲ್ಲಿ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿ ಈ ಮೂರು ಹೆಸರುಗಳು ಇವೆಯೆಂದು ಹೇಳುತ್ತಿದ್ದಾರೆ. ಒಂದು ದಿನ ಒಬ್ಬ ಕ್ರೈಸ್ತ ಬೋಧಕನನ್ನು ಬೇಟಿಯಾದಾಗ ಆತನಲ್ಲಿ ಮೂರು ಆತ್ಮಗಳ ವಿಷಯವನ್ನು ಕುರಿತು ಸ್ವಲ್ಪ ಸಮಯ ಮಾತನಾಡುವುದು ನಡೆದಿದೆ. ಆ ವಿಷಯವನ್ನು ಈಗ ನೋಡಿರಿ.

**ನಾನು :–** ನೀವು ಕ್ರೈಸ್ಥ ಬೋಧಕರಲ್ಲವೇ! ನೀವು ಹೇಳುವ ಜ್ಞಾನವೇ ಉಳಿದ ಕ್ರೈಸ್ಥರೆಲ್ಲರೂ ಕೇಳುತ್ತಿದ್ದಾರೆ. ನೀವು ಯೇಸುನನ್ನು ಮನುಷ್ಯ ಕುಮಾರನು ಎಂದು ಹೇಳುತ್ತಿರುತ್ತೀರ ಅಲ್ಲವೆ! ಯೇಸು ಮನುಷ್ಯ ಕುಮಾರನೇನಾ? ದೇವರ ಕುಮಾರನು ಅಲ್ಲವಾ!

**ಬೋಧಕನು :–** ಯೇಸು ನಾವು ನೋಡುವ ಪ್ರಕಾರ ಮನುಷ್ಯ ಕುಮಾರನೇ. ಆತನನ್ನು ನಾವು ಮನುಷ್ಯ ಕುಮಾರನೆಂದೇ ಹೇಳಬೇಕು. ಆದರೇ ಯೇಸು ಕೆಲವು ಸಂದರ್ಭಗಳಲ್ಲಿ ತನ್ನನ್ನು ತಾನು ದೇವರ ಕುಮಾರನನ್ನಾಗಿ ಹೇಳಿದ್ದಾನೆ.

**ನಾನು :–** ಯೇಸು ದೇವರ ಕುಮಾರನು ಅಲ್ಲವಾ?

**ಬೋಧಕನು :–** ನಮಗೆ ತಿಳಿದಮಟ್ಟಿಗೆ ಆತನು ತಾಯಿ ತಂದೆ ಇರುವವನಾಗಿ ಹುಟ್ಟಿದ್ದಾನೆ. ಆದ್ದರಿಂದ ಮನುಷ್ಯ ಕುಮಾರನು ಎಂದಿದ್ದೇವೆ.

**ನಾನು :–** ತಂದೆ ಎಂದರೆ ಯಾರು? ಯೇಸುಗೆ ತಂದೆ ಯಾರು?

**ಬೋಧಕನು :–** ಯೇಸುಗೆ ತಂದೆ ದೇವರೇಯೆಂದು ಹೇಳಬೇಕು. ತಂದೆಯೆಂದು ದೇವರನ್ನೇ ಅನ್ನಬೇಕು.

**ನಾನು :–** ಪರಿಶುದ್ಧಾತ್ಮ ಎಂದರೇ ಯಾರು.

**ಬೋಧಕನು:–** ದೇವರೆಂದೇ ಹೇಳಬೇಕು.

ನಾನು ಬೋಧಕನೊಂದಿಗೆ ನಡೆಸಿದ ಸಂಭಾಷಣೆಯಲ್ಲಿ **ತಂದೆ, ಕುಮಾರನು, ಪರಿಶುದ್ಧಾತ್ಮ** ಎನ್ನುವ ಪದಗಳಿಗೆ ಅರ್ಥ ಆತನು ಸ್ವಲ್ಪವಾದರೂ ಹೊಂದಾಣಿಕೆ ಇಲ್ಲದಂತೆ ಹೇಳಿದ್ದಾನೆ. ತಂದೆ, ಪರಿಶುದ್ಧಾತ್ಮ ಇಬ್ಬರೂ ಒಂದೇಯೆಂದು ಹೇಳಿದ್ದಾನೆ. ನಾವು ಹೇಗೆ ಹೇಳಿಕೊಂಡರೂ ಫರವಾಗಿಲ್ಲ. ಆದರೆ ಹೇಳಿರುವುದು ಸತ್ಯವಾ ಅಲ್ಲವಾ! ಎಂದು ಹೇಳಿದವರು, ಕೇಳಿರುವುದು ಸತ್ಯವಾ ಅಲ್ಲವಾ! ಎಂದು ಕೇಳಿದವರು ನೋಡಿಕೊಳ್ಳುವುದು ಒಳ್ಳೆಯದು. ಬೋಧಕನು ಸ್ವಲ್ಪ ಹೆಚ್ಚು ಕಡಿಮೆ ಹೇಳಿದರೂ ಕ್ರೈಸ್ಥರಲ್ಲಿಯೇ ಮೂರು ಆತ್ಮಗಳನ್ನು ಕುರಿತು ಹೇಳಿಕೊಳ್ಳುವುದಾದರೂ ಇದೆ. ಉಳಿದ ಎರಡು ಮತಗಳಲ್ಲಿ ಮೂರು ಆತ್ಮಗಳನ್ನು ಗುರುತಿಗಾದರೂ ಅಂದುಕೊಳ್ಳುವುದಿಲ್ಲ. ಆಧ್ಯಾತ್ಮಿಕಕ್ಕೆ ಮೂಲಾಧಾರ ಮೂರು ಆತ್ಮಗಳಾದಾಗ, ಅವುಗಳನ್ನು ತಿಳಿಯದೆ ಹೋದರೆ **ಆಧ್ಯಾತ್ಮಿಕ** ಸ್ವಲ್ಪವೂ ತಿಳಿಯುವುದಿಲ್ಲವೆಂದು ಹೇಳಬಹುದು.

ಯೇಸು ಶಿಲುಬೆಯನ್ನು ಹಾಕಲ್ಪಟ್ಟ ನಂತರ, ಬಾಹ್ಯ ದೃಷ್ಟಿ ಇರುವವರು ಯೇಸು ಮರಣಿಸಿದ ಶಿಲುಬೆಯನ್ನು, ಯೇಸುಗೆ ಗುರುತಾಗಿ ಇಟ್ಟುಕೊಳ್ಳುವುದು ನಡೆದಿದೆ. ಯೇಸುನನ್ನು ಇಟ್ಟುಕೊಂಡರೆ ಅದು ಹಿಂದೂಗಳಂತೆ ಯೇಸುನನ್ನು ದೇವತೆಗಳಜೊತೆಗೆ ಬೆರೆಸಿದಂತಾಗುತ್ತದೆಂದು ಆತನ ಗುರುತಾಗಿ ಶಿಲುಬೆಯನ್ನು ಇಟ್ಟುಕೊಳ್ಳುವುದು ನಡೆದಿದೆ. ನಾವು ಯೇಸು ಭಕ್ತರು ಎಂದು ಶಿಲುಬೆಯನ್ನು ಧರಿಸಿದವರು ಇದ್ದಾರೆ. ಹಾಗೇ ಇದು ಯೇಸು ಪ್ರಾರ್ಥನಾಲಯ ಎಂದು ತಿಳಿಯುವಂತೆ ಚರ್ಚಿಗಳ ಮೇಲೆ ಶಿಲುಬೆಯನ್ನು ಇಡುವುದು ಇದೆ. ಎಲ್ಲಿಯಾದರೂ ಶಿಲುಬೆ ಎಂದರೆ ಕ್ರೈಸ್ಥವವೆಂದು, ಕ್ರೈಸ್ಥವವೆಂದರೆ ಶಿಲುಬೆ

ಎಂದು ತಿಳಿಯುವಂತೆ ಮಾಡಿದ್ದಾರೆ. ಇದೆಲ್ಲವೂ ಬಾಹ್ಯದೃಷ್ಠಿ ಇರುವವರು ಮಾಡಿರುವುದು. ಸ್ವಲ್ಪ ಸೂಕ್ಷ್ಮಜ್ಞಾನ ಇರುವವರು ಗ್ರಂಥದಲ್ಲಿನ ಜ್ಞಾನವನ್ನು ಗ್ರಹಿಸಿದವರಾಗಿ ಬೈಬಲ್ ಗ್ರಂಥದಲ್ಲಿ ಹೇಳಿದ ಸಾರಾಂಶವಾದ ಜ್ಞಾನವನ್ನು, ಮೂಲಾಧಾರವಾದ ಜ್ಞಾನವನ್ನು ತಿಳಿದವರಾಗಿ, ತಿಳಿದ ಜ್ಞಾನಕ್ಕೆ ಗುರುತಾಗಿ ದೇವರ ಮುದ್ರೆಯನ್ನು ತಯಾರು ಮಾಡಿ ಚರ್ಚಿಗಳ ಮುಂದೆ, ಚರ್ಚಿಗಳ ಮೇಲೆ ಇಟ್ಟಿದ್ದಾರೆ. ಕೆಲವರು ಕ್ರೈಸ್ಥರು ಯೇಸು ಮರಣಿಸಿದ ಶಿಲುಬೆಯನ್ನು ಯೇಸುಗೆ ಗುರುತಾಗಿ ಇಟ್ಟರೆ, ಕೆಲವರು ಮಾತ್ರ ದೇವರ ಮುದ್ರೆಯನ್ನು ಇಡುವುದಾಗಿದೆ. ಹೆಚ್ಚಿನ ಜನರು ಬಾಹ್ಯದೃಷ್ಠಿ ಇರುವವರು ಶೇ.90 ರಷ್ಟು ಶಿಲುಬೆಯನ್ನೇ ಇಟ್ಟುಕೊಂಡರೆ, ಕೇವಲ ಶೇ. 10ರಷ್ಟು ಜನರು ದೇವರ ಮುದ್ರೆಯನ್ನು ಚರ್ಚಿಗಳ ಹತ್ತಿರ ಇಡುವುದಾಗಿದೆ. ಹೆಚ್ಚುಜನರು ಇಟ್ಟಿರುವ ಶಿಲುಬೆ ಆಕಾರವು ಎಲ್ಲರಿಗೂ ತಿಳಿದಿದೆ. ಆದರೇ ಸೂಕ್ಷ್ಮಜ್ಞಾನದೊಂದಿಗೆ ಒಳಗೊಂಡಿರುವ ದೇವರಮುದ್ರೆ ಬಹಳಜನರಿಗೆ ತಿಳಿದಿಲ್ಲ. ಒಂದುಸಲ ಶಿಲುಬೆಗು, ದೇವರ ಮುದ್ರೆಗು ಆಕಾರ ನಿರ್ಮಾಣವನ್ನು ಕೆಳಗೆ ನೋಡೋಣ.




**ಶಿಲುಬೆ**




**ದೇವರ ಮುದ್ರೆ**

ಶಿಲುಬೆ ರೂಪವನ್ನು, ದೇವರ ಮುದ್ರೆರೂಪವನ್ನು ನೋಡಿದಂತಾದರೆ ಶಿಲುಬೆ ಬಾಹ್ಯ ಅರ್ಥದಿಂದ ಕೂಡಿಕೊಂಡಿದೆ. ಯೇಸುನನ್ನು ಶಿಲುಬೆ ಆಕಾರವಿರುವ ಮರದ ತೊಲೆಯ ಮೇಲೆ ಇಟ್ಟು ಕಾಲುಗಳಿಗೆ, ಕೈಗಳಿಗೆ ಮೊಳೆಗಳು ಹೊಡೆದಿದ್ದಾರೆಂದು ಹೇಳುತ್ತಿರುತ್ತಾರೆ. ಶಿಲುಬೆ ಮೇಲೆ ಗುರುತುಗಳು ತೋರಿಸಿದ ಕಡೆ ಕಾಲುಗಳಿಗು, ಕೈಗಳಿಗು ಮಳೆಗಳು ಹೊಡೆದಿದ್ದಾರೆಂದು ಹೇಳುತ್ತಿರುವರು. ಕೆಲವು ಶಿಲುಬೆಗಳ ಮೇಲೆ ಯೇಸು ಶರೀರ ಶಿಲುಬೆಗೆ ಜೋತುಬಿದ್ದಂತೆ ತೋರಿಸಿರುತ್ತಾರೆ. ಕೆಲವು ಶಿಲುಬೆಗಳಿಗೆ ಯೇಸು ಇಲ್ಲದೇ ಅದನ್ನು ನೋಡಿದರೆ ಆತನನ್ನು ನೋಡಿದಂತೆ ಎಂದು ಗುರುತಾಗಿ ಹೇಳುತ್ತಿರುತ್ತಾರೆ. ಶಿಲುಬೆಯಲ್ಲಿ ಜ್ಞಾನ ಏನೂ ಇಲ್ಲ. ಅದೇ ಕೆಳಗಿರುವ ದೇವರಮುದ್ರೆಯಲ್ಲಿ ಎಷ್ಟೋ ಸಾರಾಂಶವಾದ ಜ್ಞಾನವಿದೆ. ಮೊದಲು ಕೆಲವರು ಬಾಹ್ಯಾರ್ಥವಿರುವ ಶಿಲುಬೆಯನ್ನು ಚರ್ಚಿಗಳ ಹತ್ತಿರ ಇಟ್ಟರೆ ಅದರಲ್ಲಿ ಜ್ಞಾನವು ಏನೂ ಇಲ್ಲವೆಂದು ಕೆಲವರು ಜ್ಞಾನಿಗಳು ಮತ್ತಾಯಿ ಸುವಾರ್ತೆ 28ನೇ ಅಧ್ಯಾಯದಲ್ಲಿ 19ನೇ ವಚನದಲ್ಲಿರುವ **ತಂದೆ, ಕುಮಾರನು, ಪರಿಶುದ್ಧಾತ್ಮ** ಎನ್ನುವ ಅರ್ಥದಿಂದ ಕೂಡಿಕೊಂಡ ಗುರುತನ್ನು ಇಟ್ಟಿದ್ದಾರೆ.

ಮೊದಲು ಜ್ಞಾನಿಗಳಾದವರು ದೇವರ ಮುದ್ರೆಯಲ್ಲಿ ಮೊದಲು ಹುಟ್ಟಿದ ಪ್ರಕೃತಿಯನ್ನು ಸೇರಿಸಿ ದೇವರು ನಾಲ್ಕುಭಾಗಗಳಾಗಿ ಇದ್ದಾನೆಂದು ವಿವರವಾಗಿ ತಿಳಿಯುವಂತೆ ಇಟ್ಟಿದ್ದಾರೆ. ನಂತರ ಕೆಲವರು ಜ್ಞಾನ ತಿಳಿದವರು ವಾಕ್ಯದಲ್ಲಿರುವ ಮೂರು ಆತ್ಮಗಳನ್ನೇ ಗುರುತಿಸಿ ಇಟ್ಟರೆ ಆತ್ಮಗಳ ವಿಷಯವೇ ಮುಖ್ಯವಾಗಿ ತಿಳಿಯುತ್ತದೆ, ಜ್ಞಾನದಲ್ಲಿ ಮುಖ್ಯವಾದವುಗಳು, ಮೂಲಾಧಾರವಾದವುಗಳು ಮೂರು ಆತ್ಮಗಳೇ ಎಂದು ಮೇಲಿರುವ ಮೊದಲ ಪ್ರಕೃತಿಯನ್ನು ತೆಗೆದುಹಾಕಿ ಮೂರು ಗುರುತುಗಳನ್ನು ಮಾತ್ರ ಇಟ್ಟಿದ್ದಾರೆ. ದೇವರ ಮುದ್ರೆ ಮೊದಲಿರುವ ಸಂಪೂರ್ಣವಾದ ಆಕಾರವನ್ನು ನೋಡಿರಿ.

ಕೊನೆಗೆ ಕೆಲವು ಕಡೆ ಮಾತ್ರ ಉಳಿದಿರುವುದು ಮೂರು ಚಕ್ರಗಳ ಗುರುತು. ಬಹುಶಃ ಬ್ರೆಜಿಲ್ ಮತ್ತು ಕೆಲವು ದೇಶಗಳಲ್ಲಿ ಈದಿನ ಸಹ ಚರ್ಚಿಗಳ ಹತ್ತಿರ ಶಿಲುಬೆಗಳನ್ನು ಇಡದೆ ಮೂರು ಗುರುತುಗಳಿರುವ ದೇವರ ಮುದ್ರೆಯನ್ನು ಗುರುತಾಗಿಡುವುದು ನಡೆಯುತ್ತಿದೆ. ಕ್ರೈಸ್ತರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ




ನಂತರ ದೇವರ ಮುದ್ರೆ ಬದಲಾದ ರೂಪವನ್ನು ಕೆಳಗೆ ನೋಡಬಹುದು.




**ದೇವರು ಮುದ್ರೆ**

ಅವರು ಯೇಸು ಪ್ರಭುವು ಮರಣಿಸಿದ ಶಿಲುಬೆ ಗುರುತನ್ನು ಯೇಸುಗೆ ಗುರುತಿಗಾಗಿ ಇಟ್ಟುಕೊಳ್ಳುತ್ತಿರುವಾಗ ಕೆಲವು ದೇಶಗಳಲ್ಲಿ ಸ್ವಲ್ಪಜನ ಮಾತ್ರ ಮೂರು ಚೆಕ್ಕೆಗಳ ಗುರುತನ್ನು ಚರ್ಚಿಗಳ ಹತ್ತಿರ ಇಡುವುದಾಗಿದೆ. ಕಾಲ ಕಳೆದಂತೆಲ್ಲಾ ಅರ್ಥಗಳು ತಿಳಿಯದೆಹೋಗಿ ಆಕಾರಕ್ಕೆ ಮಾತ್ರ ಕೆಲವುಕಡೆ ಉಳಿದಿವೆ. ಮುಖ್ಯವಾಗಿ ಹೇಳಿದರೆ ಈದಿನ ಕೂಡಾ ಕ್ರೈಸ್ತರಿಗೆ ದೊಡ್ಡದಾಗಿರುವ ವಾಟಿಕನ್ ಸಿಟೀಯಲ್ಲಿನ ಪೋಪ್ ಸಹ ಮೂರು ಗೆರೆಗಳಿರುವ ಗುರುತನ್ನೇ ಹಿಡಿದುಕೊಂಡಿರುವುದನ್ನು ನಾನು ಒಂದು ಫೋಟೋದಲ್ಲಿ ನೋಡಿದ್ದೇನೆ. ಮೂರು ಗೆರೆಗಳ ಗುರುತಿಗೆ ಮೂರು ಆತ್ಮಗಳ ಹೆಸರುಗಳನ್ನೇ ಬರೆದುಕೊಳ್ಳುವುದು ವಿಶೇಷ. ಇದನ್ನನುಸರಿಸಿ ಮೂರು ಆತ್ಮಗಳ ಜ್ಞಾನ ಕ್ರೈಸ್ತರಲ್ಲಿಯೇ ಅದೂ ಕೆಲವುಕಡೆ ಮಾತ್ರ ಕಾಣಿಸುತ್ತಿದೆ. ವಾಟಿಕನ್ ಸಿಟೀಯಲ್ಲಿ ಪೋಪ್ ಭುಜದ ಮೇಲೆ ಇಟ್ಟುಕೊಂಡ ಮೂರು ಚಕ್ರಗಳ ಗುರುತನ್ನು ನಂತರ ಪುಟದ ಚಿತ್ರದಲ್ಲಿ ನೋಡಿರಿ.



ಈ ದಿನ ಭೂಮಿಮೇಲೆ ಉಳಿದಿರುವ ಗುರುತುಗಳು ಇವು. ಇವುಗಳಿಂದಾದರೂ ಗ್ರಂಥದಲ್ಲಿನ ವಾಕ್ಯ ಸ್ವಲ್ಪ ದೃಶ್ಯರೂಪದೊಳಗೆ ಬಂದಿದೆ. ಇವುಗಳಿಂದ ಸಂತೃಪ್ತಿ ಹೊಂದದೆ ಸಂಪೂರ್ಣವಾದ ನಾಲ್ಕು ಚಕ್ರಗಳ ದೇವರ ಮುದ್ರೆಯನ್ನು ಹಣೆಯ ಭಾಗದಲ್ಲಿ ಇಟ್ಟುಕೊಂಡವನು ನಿಜವಾದ ಕ್ರೈಸ್ತವನಾಗಿ ದೇವರ ದೃಷ್ಠಿಯಲ್ಲಿ ಲೆಕ್ಕಿಸಲ್ಪಡುತ್ತಾನೆ. ದೇವರು, ದೇವರ ಜ್ಞಾನ ನಮ್ಮ ಶರೀರದಲ್ಲಿದೆ. ಆದ್ದರಿಂದ ದೇವರ ಮುದ್ರೆಯನ್ನು ಶರೀರದ ಮೇಲೆಯೇ ಇಟ್ಟುಕೊಂಡು ಅದನ್ನು ಗೌರವಿಸಬೇಕು. "ನಾವು ಕ್ರೈಸ್ತರು ಹಣೆಯ ಮೇಲೆ




ಗುರುತುಗಳು ಇಟ್ಟುಕೊಂಡರೆ ಹಿಂದೂಗಳಂತೆ ಕಾಣಿಸುತ್ತೇವೇನೊ!" ಎಂದು ಅಂದುಕೊಳ್ಳಬಾರದು. ಪ್ರತಿ ಕ್ರೈಸ್ತನು ಹಣೆಯ ಮೇಲೆ ನಾಲ್ಕು ಚಕ್ರಗಳ ಗುರುತನ್ನು ಧರಿಸಬೇಕು. ಹಣೆಯ ಮೇಲೆ ಧರಿಸಿರೆಂದು (ಪ್ರಕಟಣೆ 9–4)ರಲ್ಲಿ, ದೇವರೇ ಹೇಳಿದ್ದಾನೆ. ನೀನು ಧರಿಸುವ ದೇವರ ಚಿಹ್ನೆ ಪ್ರತಿ ಮನುಷ್ಯನಿಗು ಸಂಬಂಧಿಸಿರುವುದಾಗಿದೆ. ಆದ್ದರಿಂದ ದೇವರ ಜ್ಞಾನದ ಬಳಿ ನಾಚಿಕೆಪಡಬಾರದು. ಇಲ್ಲಿಯವರೆಗು ಹೇಳಿದ ಮೂರು ಆತ್ಮಗಳ ಜ್ಞಾನವನ್ನು ಭಯಹೊಂದಿ, ಭಕ್ತಿ ಹೊಂದಿ ತಿಳಿಯಬೇಕು. ತಿಳಿಯದೆ ಹೋದರೆ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸು. ದೇವರ ಮುದ್ರೆಯನ್ನು ಧರಿಸಿ, ದೇವರ ಕ್ಷಮಾಶೀಲತೆಯನ್ನು ಹೊಂದಿ, ದೇವರೊಳಗೇ ಸೇರಿಹೋಗಬೇಕೆಂದು ಅದಕ್ಕೆ **"ದೇವರ ಮುದ್ರೆ"** ದಾರಿಯೆಂದು ಹೇಳುತ್ತಿದ್ದೇವೆ.

ಮನುಷ್ಯರು ಸೃಷ್ಟ್ಯಾದಿಯಿಂದ ಇದ್ದಾರೆ. ಎಷ್ಟೋ ಲಕ್ಷಗಳ ವರ್ಷಗಳು ಕಳೆದುಹೋದಾಗ, ಸುಮಾರು ಎರಡುಸಾವಿರ ವರ್ಷಗಳಿಂದ 'ಮತ' ಎನ್ನುವುದು ಮನುಷ್ಯರಲ್ಲಿ ಸೇರಿಹೋಗಿದೆ. ಮನುಷ್ಯ ಮೊದಲಿನಿಂದ ಇರುವ ಜ್ಞಾನವನ್ನು

ಬಿಟ್ಟು ಮತವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಾನೆ. 'ಮೊದಲು ಮತ ನಂತರ ಜ್ಞಾನ' ಎನ್ನುವ ಪದ್ಧತಿಯಲ್ಲಿ ಇದ್ದಾನೆ. ಮುಸ್ಲಿಮ್‌ರು ಖುರ್‌ಆನ್ ಗ್ರಂಥ ನಮ್ಮದೆಂದು ಹೇಳಿದರೂ, ಅವರು ಖುರ್‌ಆನ್‌ಗಿಂತ ಹದೀಸು ಗ್ರಂಥಗಳಿಗೇ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಿದ್ದಾರೆ. ಪ್ರತಿ ಮತದಲ್ಲಿಯೂ ಮತಾಚಾರಗಳು ದೈವಜ್ಞಾನವನ್ನು ಹಿಂದಕ್ಕೆ ತಳ್ಳಿಹಾಕುತ್ತಿವೆ. ಇಲ್ಲ ನಾವು ಜ್ಞಾನಕ್ಕೇ ಬೆಲೆ ಕೊಡುತ್ತಿದ್ದೇವೆಂದು ಬುರುಡೆ ಬಿಡುವವರು ಕೂಡಾ ಇದ್ದಾರೆ. ಈದಿನ ಯಾವ ಮತದಲ್ಲಾಗಲಿ ಮತಕ್ಕು, ಮತ ಸಾಂಪ್ರದಾಯಗಳಿಗು ಹೆಚ್ಚಿನ ಬೆಲೆಯನ್ನು ಕೊಡುತ್ತಿದ್ದಾರೆ ಹೊರತು, ದೈವಜ್ಞಾನಕ್ಕೆ ಬೆಲೆ ಕೊಡಲಿಲ್ಲ. ಮೇಲ್ನೋಟಕ್ಕೆ ನಾವು ಜ್ಞಾನಿಗಳು ಎಂದರೂ, ಅವನಲ್ಲಿ, ಮತ ಶೇ. 90 ರಷ್ಟು, ದೈವಜ್ಞಾನ ಶೇ.10 ರಷ್ಟು ಮಾತ್ರವೇ ಇದೆ. ಕೆಲವುಕಡೆ ಆ ಹತ್ತರಷ್ಟು ಕೂಡಾ ಕಾಣಿಸುತ್ತಿಲ್ಲ.

ಉದಾಹರಣೆಗೆ ಖುರ್‌ಆನ್ ಗ್ರಂಥದಲ್ಲಿ 15ನೇ ಸೂರಾದಲ್ಲಿ 28ನೇ ಆಯತ್‌ನಿಂದ 31ರವರೆಗು ನೋಡೋಣ. ಈ ವಾಕ್ಯಗಳು ನೋಡಿದ ನಂತರ ಅವರು ಮತಕ್ಕೆ ಶೇಕಡ ಎಷ್ಟು, ದೇವರ ಜ್ಞಾನಕ್ಕೆ ಶೇಕಡ ಎಷ್ಟು ಬೆಲೆ ಕೊಡುತ್ತಿದ್ದಾರೊ ತಿಳಿಯುತ್ತದೆ. **(15-28,29,30,31) "ನಿನ್ನ ಪ್ರಭುವು ದೇವ ದೂತರೊಂದಿಗೆ ಹೀಗೆ ಹೇಳಿದ್ದಾನೆ. "ನಿಶ್ಚಯವಾಗಿ ನಾನು ಮೊಳಗುವ ಮಣ್ಣು ರೂಪಾಂತರ ಹೊಂದಿದ ಜಿಗಟು ಮಣ್ಣಿನಿಂದ ಮಾನವನನ್ನು ಸೃಷ್ಠಿಸುತ್ತಿದ್ದೇನೆ. (29) ಇನ್ನು ನಾನು ಆತನಿಗೆ ಪೂರ್ತಿಯಾಗಿ ಆಕಾರಕೊಟ್ಟು ಆತನೊಳಗೆ ನನ್ನ ಆತ್ಮವನ್ನೇ ಊದಿದಾಗ ನೀವೆಲ್ಲರೂ ಆತನ ಮುಂದೆ ಸಾಷ್ಟಾಂಗ ಬೀಳಿರಿ. (30) ದೂತರೆಲ್ಲರೂ ಸಾಷ್ಟಾಂಗಬಿದ್ದಿದ್ದಾರೆ. (31) ಒಬ್ಬ ಇಬ್ಲೀಸು ಸಾಷ್ಟಾಂಗ ಬೀಳುವವರಲ್ಲಿ ಸೇರುವುದಕ್ಕೆ ನಿರಾಕರಿಸಿದ್ದಾನೆ"**. ಈ ವಿಧವಾಗಿ ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ದೇವರು ಸ್ವತಃವಾಗಿ 'ನಾನು ಒಬ್ಬ ಮನುಷ್ಯನನ್ನು ತಯಾರು ಮಾಡಿ ಕಳಿಸುತ್ತೇನೆ. ಆ ಮನುಷ್ಯನಲ್ಲಿ ನನ್ನ ಆತ್ಮವನ್ನೇ ತುಂಬಿ ಕಳಿಸುತ್ತೇನೆ' ಎಂದು ಹೇಳಿದಾಗ ಬರುವ ವ್ಯಕ್ತಿ ದೊಡ್ಡವನೆಂದೇ ಅಲ್ಲವೆ! ಅರ್ಥ. ದೇವರು ತನ್ನ ಆತ್ಮನನ್ನೇ ಊದಿ ಕಳುಹಿಸುವುದರಿಂದ ದೇವರ

ಶಕ್ತಿ ಇರುವವನೇ ಬರುತ್ತಾನೆ. ದೇವರ ಪ್ರತಿನಿಧಿ ಬರುತ್ತಿದ್ದಾನೆಂದು ನನ್ನನ್ನು ಗೌರವಿಸಿದಂತೆ ನನ್ನ ಪ್ರತಿನಿಧಿಗೆ ಸಾಷ್ಟಾಂಗ ನಮಸ್ಕಾರ ಮಾಡಿರೆಂದು ದೇವರೇ ಹೇಳಿದಾಗ, ದೇವದೂತರೆಲ್ಲರು ಸಾಷ್ಟಾಂಗ ನಮಸ್ಕಾರ ಮಾಡಿದಾಗ, ಮನುಷ್ಯನಲ್ಲಿ ಇಬ್ಲೀಸು (ಮಾಯೆ) ಇರುವುದರಿಂದ ದೇವರ ಹತ್ತಿರದಿಂದ ಬಂದಿರುವವನಿಗೆ ಮನುಷ್ಯ ನಮಸ್ಕಾರ ಮಾಡಲಿಲ್ಲ. ಇಬ್ಲೀಸ್ (ಮಾಯೆ) ಇರುವವನು ದೇವರ ಪ್ರತಿನಿಧಿಯಾದ ಭಗವಂತನಿಗೆ ಮನುಷ್ಯ ಗರ್ವದಿಂದ ನಮಸ್ಕಾರ ಮಾಡದಂತಾಗಿದ್ದಾನೆ. ಈದಿನ ಮುಸ್ಲಿಮ್‌ರು ನಮಸ್ಕರಿಸದಿರುವುದನ್ನು ಸಮರ್ಥಿಸುತ್ತಿದ್ದಾರೆ. "ತಾವು ದೇವರಿಗೆ ಹೊರತು ಇತರರಿಗೆ ನಮಸ್ಕರಿಸುವುದಿಲ್ಲ" ಎಂದು ಹೇಳುತ್ತಿದ್ದಾರೆ.

ದೇವರು ಸಾಧಾರಣ ಮನುಷ್ಯರಿಗೆ ನಮಸ್ಕಾರ ಮಾಡಿರೆಂದು ಹೇಳಲಿಲ್ಲ. 'ತಾನು ಕಳಿಸಿದ ತನ್ನ ಪ್ರತಿನಿಧಿಗೆ' ಎಂದು ಹೇಳಿದ್ದಾನೆ. ಖುರ್‌ಆನ್ ಗ್ರಂಥ ಹೇಳಲ್ಪಟ್ಟು 1400 ವರ್ಷಗಳು ಆಗಿವೆ. ಆಗ 'ನಾನು ಒಬ್ಬ ಮಾನವನನ್ನು ತಯಾರು ಮಾಡಿ ಕಳಿಸುತ್ತೇನೆ' ಎಂದು ಅಂದರೇ ಅದು ಖುರ್‌ಆನ್ ಹೇಳಿದ ನಂತರವೇಯೆಂದು ಅರ್ಥವಾಗುತ್ತಿದೆ. 'ದೇವರು ಅವತರಿಸುವುದಿಲ್ಲ' ಎಂದು ಮುಸ್ಲಿಮ್‌ರು ಹೇಳುತ್ತಿದ್ದಾರೆ. 'ನಾನು ಅವತರಿಸುತ್ತೇನೆ' ಎಂದು (89–21,22) ರಲ್ಲಿ ಹೇಳಿದ್ದಾನೆ. ಅಷ್ಟೇ ಅಲ್ಲದೆ ದೇವರು ಪ್ರತ್ಯಕ್ಷವಾಗಿ ಎಲ್ಲಿಗೂ ಬರುವುದಿಲ್ಲ. ತನ್ನ ಪ್ರತಿನಿಧಿಯಾಗಿ ತಾನೇ ಬರುತ್ತಾನೆಂದು ಈ ವಾಕ್ಯಗಳಲ್ಲಿ ತಿಳಿದುಹೋಗುತ್ತಿದೆ. ತನ್ನ ಪ್ರತಿನಿಧಿ ಎಂದರೆ ಸುಮಾರು ದೇವರ ಶಕ್ತಿ ಹೊಂದಿರುವವನೇ ಎಂದು ಅಲ್ಲವೆ! ಅರ್ಥ. ಆಗಲೂ ಕೂಡಾ ನಾವು ನಮಸ್ಕರಿಸುವುದಿಲ್ಲ ಎಂದರೇ ಇಬ್ಲೀಸು ಪ್ರಭಾವವೇಯೆಂದು ಅಂದುಕೊಳ್ಳದೆ ತಪ್ಪುವುದಿಲ್ಲ. ದೇವರು ಸ್ವತಃವಾಗಿ ಮನುಷ್ಯನಾಗಿ ಬಂದ ತನ್ನ ಪ್ರತಿನಿಧಿಗೆ ನಮಸ್ಕರಿಸಿರೆಂದು ಹೇಳಿದ್ದಾನೆ. ದೇವ ದೂತರು ಕೂಡಾ ನಮಸ್ಕರಿಸಿದ್ದಾರೆ. ಆದರೂ ಮನುಷ್ಯ ನಮಸ್ಕರಿಸುವುದಿಲ್ಲ ಎಂದು ಹೇಳಿದರೆ ಅದು ಅಜ್ಞಾನ ಅಲ್ಲವೆ! ಕೆಲವರು ಮುಸ್ಲಿಮ್‌ರು ನಮ್ಮ ಮತ ಷರಿಯತ್ ಪ್ರಕಾರ ನಾವು ಯಾರಿಗೂ ನಮಸ್ಕರಿಸುವುದಿಲ್ಲ ಎಂದರೇ

ದೈವ ಗ್ರಂಥಗಳಲ್ಲಿ ದೇವರು ಹೇಳಿದ ಮಾತನ್ನು ಕೂಡಾ ಲೆಕ್ಕಮಾಡುತ್ತಿಲ್ಲ ಎಂದಲ್ಲವೆ ಅರ್ಥ. ಗ್ರಂಥದಲ್ಲಿ ನನ್ನ ಪ್ರತಿನಿಧಿಗೆ ಸಾಷ್ಟಾಂಗ ನಮಸ್ಕಾರ ಮಾಡಿರೆಂದು ಹೇಳಿದಾಗ, ಮನುಷ್ಯನಲ್ಲಿನ ದೈವಜ್ಞಾನವನ್ನು ನೋಡಿ ಆತನಿಗೆ ಸಾಧಾರಣ ನಮಸ್ಕಾರವಾದರೂ ಮಾಡದೆಹೋದರೆ, ಇದು ನಮ್ಮ ಮತ ಷರಿಯತ್ ಎಂದರೇ ಮತದಿಂದ ದೇವರ ಮಾತನ್ನು ಧಿಕ್ಕರಿಸಿದಂತೆ ಅಲ್ಲವೆ! ದೇವರನ್ನು ಅಗೌರವಪಡಿಸಿದಂತೆ ಅಲ್ಲವೆ!

ಇದನ್ನನುಸರಿಸಿ ನೋಡಿದರೆ ಮನುಷ್ಯ ಮತಕ್ಕೆ ಹೆಚ್ಚಾಗಿ ಗೌರವ ಕೊಡುತ್ತಿದ್ದಾನೆ. ದೇವರ ಮಾತಿಗೆ ಗೌರವ ಕೊಡಲಿಲ್ಲವೆಂದು ಪ್ರತ್ಯಕ್ಷವಾಗಿ ತಿಳಿಯುತ್ತಿದೆ. ಒಬ್ಬ ಮುಸ್ಲಿಮ್ ಮತದಲ್ಲಿ ಷರಿಯತ್ ಎಂದಲ್ಲ, ಎಲ್ಲಾ ಮತಗಳಲ್ಲಿಯೂ ಮತ ಪ್ರಾಬಲ್ಯ ಹೆಚ್ಚಾಗಿದೆ. ಆದ್ದರಿಂದ ಮತ ಸಾಂಪ್ರದಾಯಗಳನ್ನು ಅಚರಿಸುವುದರಲ್ಲಿ ತಪ್ಪಿಹೋಗಬಾರದು ಎಂದು ದೇವರ ಮಾತನ್ನು ಗಾಳಿಗೆ ಬಿಟ್ಟುಬಿಡುತ್ತಿದ್ದಾರೆ. ಕ್ರೈಸ್ಥರಲ್ಲಿ ಕೂಡಾ ಮುಖದ ಮೇಲೆ ದೇವರ ಮುದ್ರೆಯನ್ನು ಧರಿಸದೆಹೋದರೆ ಶಿಕ್ಷೆ ತಪ್ಪುವುದಿಲ್ಲವೆಂದು ದೇವರು ಹೇಳಿದರೂ, **ದೇವರ ಮುದ್ರೆ** ಎಂದು ತನ್ನ ಹೆಸರನ್ನು ಹೇಳಿಕೊಂಡರೂ "ನಾವು ನಮ್ಮ ಮತಕ್ಕೆ ಕಟ್ಟುಬಿದ್ದು ಇದ್ದೇವೆ. ನಮ್ಮ ಮತ ಸಾಂಪ್ರದಾಯದ ಪ್ರಕಾರ ಹಣೆಯ ಮೇಲೆ ಯಾವ ಗುರುತನ್ನು ಧರಿಸುವುದಿಲ್ಲ" ಎಂದು ಹೇಳಿದರೆ ದೇವರ ಮಾತನ್ನು ಧಿಕ್ಕರಿಸಿದಂತೆ ಅಲ್ಲವೆ! ದೈವಗ್ರಂಥದಲ್ಲಿನ ದೇವರ ವಾಕ್ಯವನ್ನು ಅಗೌರಪಡಿಸಿದಂತೆ ಅಲ್ಲವೆ! ಯಾರಿಷ್ಟಕ್ಕವರು 'ಮತ' ಎಂದು ದೇವರ ಮಾತನ್ನು ಲೆಕ್ಕಮಾಡದೆಹೋದರೆ ದೇವರು ಮನುಷ್ಯರನ್ನು ಏನು ಅನ್ನದಂತೆ ಮೌನವಾಗಿದ್ದರೂ, ದೇವರ ಪಾಲಕರು ಸುಮ್ಮನಿರುವುದಿಲ್ಲ. ಗ್ರಹಗಳಾದರೆ ಚೇಳುಕುಟುಕಿದ ಬಾಧೆಯಷ್ಟು ಐದು ತಿಂಗಳಕಾಲ ಬಾಧಿಸುತ್ತಾರೆ. ಭೂತಗಳಾದರೇ ಪೂರ್ತಿಯಾಗಿ ಸಾಯಿಸದೆ ಬಿಡುವುದಿಲ್ಲ. ಆದ್ದರಿಂದ ಮನುಷ್ಯರು ಮತವನ್ನು ಬಿಟ್ಟು, ದೇವರ ಮಾತಿನ ಪ್ರಕಾರ ಆಚರಿಸಿರೆಂದು ಹೇಳುತ್ತಿದ್ದೇವೆ. "ದೇವರ ಮಾರ್ಗಕ್ಕೆ ಆತಂಕವಾದ ಕಣ್ಣನ್ನಾದರೂ ಕಿತ್ತುಹಾಕು, ಕೈಯನ್ನಾದರೂ

ಕತ್ತರಿಸಿಹಾಕು" ಎಂದು ದೇವರೇ ಹೇಳಿದಾಗ ನಿನ್ನ ಮತ ಆಚಾರಗಳನ್ನು ಬಿಡಲಾರೆಯಾ? ಆಲೋಚಿಸಿಕೊ, ವಾಕ್ಯದ ಪ್ರಕಾರ ದೇವರ ಮುದ್ರೆಯನ್ನು ಧರಿಸುತ್ತೀಯೋ! ಮತ ಎನ್ನುತ್ತೀಯೋ!! ಪಾಲಕರು ನೋಡುತ್ತಾರೆ.

ಇಂತಿ

**ಯೋಗೀಶ್ವರ್**






**ಒಂದು ವಿಷವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ, ಅದು ಸತ್ಯವಾಗುವುದಿಲ್ಲ. ಸತ್ಯವನ್ನು ಸಾವಿರಜನ ಅಲ್ಲಗಳೆದರೂ, ಅದು ಅಸತ್ಯವಾಗುವುದಿಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

